# ಅಧ್ಯಾತ್ಮಪ್ರಕಾಶ

ಸಂಸ್ಥಾಪಕರು : ಪ. ಪ. ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು

'एतज्ज्ञेयं नित्यमेवाऽऽत्मसंस्थं नातःपरं वेदितव्यं हि किञ्चित्'

ಸಂಪುಟ ೫೬ ನವೆಂಬರ್ ೧೯೮೬ ಸಂಚಿಕೆ ೩

## ವಿಷಯಗಳು



ಪತ್ರಿಕೆಯ ಚಂದಾ

ವರ್ಷಕ್ಕೆ

ರೂ. ೧೫-೦೦

ಪೋಷಕರಿಗೆ ರೂ. ೨೦-೦೦

ಮಹಾಪೋಷಕರಿಗೆ ರೂ. ೧೫೧-೦೦




ಹೊಸ ಸಂಪುಟಕ್ಕೆ
ಚಂದಾಹಣವನ್ನು
ಈಗಲೆ ಕಳುಹಿಸಿರಿ.

ಪತ್ರಿಕೆಯ ಸಂಪಾದಕ ಮತ್ತು ಪ್ರಕಾಶಕ:
ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,
ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ-573211

November-1986

# ಕಾರ್ಯಾಲಯದ ಸುದ್ದಿ

**ಅನುಷ್ಠಾನ :** ಶರನ್ನವರಾತ್ರಿಯ ಅನುಷ್ಠಾನವು ನಿಯೋಜಿತಕಾರ್ಯಕ್ರಮದಂತೆ ಸಾಂಗವಾಗಿ ನೆರವೇರಿತು. ಭಕ್ತಾದಿಗಳು ಎಂದಿನಂತೆ ಭಾಗವಹಿಸಿದ್ದರು. ತಾ॥ 10-12-86ರಿಂದ ಗೀತಾಜಯಂತಿ ಅನುಷ್ಠಾನವು ನಡೆಯಲಿದೆ.

**ಗ್ರಂಥಮುದ್ರಣ :** (೧) 'ಭಗವದ್ಗೀತೆಯ ಉಪನ್ಯಾಸಗಳು' ಗ್ರಂಥವು ಈವರೆಗೆ ೧೬೦ ಪುಟಗಳಷ್ಟು ಮುದ್ರಿತವಾಗಿದೆ. (೨) 'ವಿಷ್ಣುಸಹಸ್ರನಾಮಸ್ತೋತ್ರ'ವೂ ಸಿದ್ಧವಾಗುತ್ತಿದೆ. (೩) 'ಅಧ್ಯಾತ್ಮಶಂಕರವಿಜಯ'ವನ್ನು ಪೂರೈಸಿ ಪ್ರಕಟಿಸಬೇಕೆಂದು ಬೇಡಿಕೆಗಳು ಬರುತ್ತಲೇ ಇವೆ. ಈ ವಿಷಯದಲ್ಲಿಯೂ ಆದಷ್ಟು ಕ್ಷಿಪ್ರವಾಗಿ ತೀರ್ಮಾನವನ್ನು ಕೈಗೊಳ್ಳಲಾಗುವದು. ವಾಚಕರು ಸಹಕರಿಸಬೇಕಾಗಿ ಪ್ರಾರ್ಥನೆ.

**ಗ್ರಂಥಮಾರಾಟ :** ಕಾರ್ಯಾಲಯದ ಮುಖ್ಯ ಆದಾಯಮೂಲವಾಗಿರುವ ಗ್ರಂಥಮಾರಾಟವು ಇನ್ನೂ ಬೆಳೆಯಬೇಕಾಗಿದೆ. ಪ್ರಸ್ಥಾನತ್ರಯಭಾಷ್ಯಗಳ ಸೆಟ್‌ನ್ನು ೫೦೦ರೂ.ಗಳಿಗೆ ಕೊಡುವ ಯೋಜನೆಗೆ ಸಾಕಷ್ಟು ಪ್ರೋತ್ಸಾಹವು ಸಿಕ್ಕಿದೆ. ಈಗಾಗಲೆ ಕೆಲವು ಮಹನೀಯರು ಗ್ರಂಥಗಳನ್ನು ತರಿಸಿಕೊಂಡಿದ್ದಾರೆ. ಕರ್ನಾಟಕದ ಮುಖ್ಯ ತಾಲ್ಲೂಕು ಕೇಂದ್ರಗಳಲ್ಲಿಯಾದರೂ ಈ ಗ್ರಂಥಗಳ ಒಂದು ಸೆಟ್ ಇರಬೇಕಾದದ್ದು ಅವಶ್ಯವಾಗಿದೆ. ಈ ವಿಷಯದಲ್ಲಿ ಆಯಾ ಊರಿನ ಅಧ್ಯಾತ್ಮವಿಚಾರಾಭಿಮಾನಿಗಳು ಮನಸ್ಸುಮಾಡಿ ನಮಗೆ ಸಹಾಯಮಾಡಬೇಕು. ಸರ್ಕಾರದವರನ್ನು ಈ ವಿಷಯದಲ್ಲಿ ಹಲವು ವರ್ಷಗಳಿಂದಲೂ ಅನೇಕಬಾರಿ ಪ್ರಾರ್ಥಿಸಿದಾಗ್ಯೂ ಈವರೆಗೂ ಏನೂ ಸಹಾಯವು ಒದಗಿರುವದಿಲ್ಲ. ಆದರೆ ಈ ಗ್ರಂಥಗಳು ಕೆಲವೇ ಪ್ರತಿಗಳು ಉಳಿದಿದ್ದು ಮತ್ತೆ ಅಚ್ಚಾಗುವದು ಭವಿಷ್ಯದ್ದೇವತೆಯ ಗರ್ಭದಲ್ಲಿರುವದರಿಂದ ಗ್ರಂಥಗಳು ಬೇಕೆನ್ನುವವರು ಕೂಡಲೆ ತ್ವರೆಮಾಡಬೇಕು. 1982ರಿಂದಲೂ ನಾವು ಗ್ರಂಥಗಳ ಬೆಲೆಯನ್ನು ಏರಿಸಿರುವದಿಲ್ಲ. ಈಚೆಗೆ ಮುದ್ರಣವಾಗಿರುವ ಗ್ರಂಥಗಳಿಗೆ ಮಾತ್ರ ಖರ್ಚುವೆಚ್ಚಗಳ ಲೆಕ್ಕಾಚಾರಕ್ಕೆ ತಕ್ಕಂತೆ ಬೆಲೆಯನ್ನು ಗೊತ್ತುಮಾಡಿದೆ. ಆದರೆ ಕೊಳ್ಳುವವರಿಗೆ ಅನುಕೂಲವಾಗಲೆಂದು ಕಮಿಷನ್ ಸಹ ನೀಡಲಾಗುತ್ತಿದೆ. ಹೆಚ್ಚಿನ ವಿಷಯಗಳಿಗೆ ಬರೆಯಿರಿ.

**ಹೊರಗಿನ ಸುದ್ದಿಗಳು :** (೧) **ಬೆಂಗಳೂರಿನ** ಭಾಗವತಪ್ರಕಾಶನಸಮಿತಿಯವರು ಐದನೇ ಸಂಪುಟವನ್ನು ತಾ॥ 11-10-86ರಂದು ಪ್ರಕಾಶನಗೊಳಿಸಿ ಆ ಸಂದರ್ಭದಲ್ಲಿ ಕೆಲವು ಗಣ್ಯವ್ಯಕ್ತಿಗಳನ್ನು ಸನ್ಮಾನಿಸಿದ್ದಾರೆ. (೨) **ದಾವಣಗೆರೆಯ** ಶಂಕರಭಜನಾಮಂಡಳಿಯವರು ಸ್ಥಳೀಯ ಶಂಕರಮಠದಲ್ಲಿ ಶ್ರೀ ಕೂಡ್ಲಿ ಶೃಂಗೇರಿಜಗದ್ಗುರುಗಳ ಕೃಪಾಶೀರ್ವಾದಗಳಿಂದ ಶರನ್ನವರಾತ್ರಿಮಹೋತ್ಸವವನ್ನು ವಿಜೃಂಭಣೆಯಿಂದ ನಡೆಸಿರುತ್ತಾರೆ. (೩) **ಹಿರೇಮಗಳೂರು** ಕೋದಂಡರಾಮಚಂದ್ರಸ್ವಾಮಿ ದೇವಾಲಯದಲ್ಲಿಯೂ ನವರಾತ್ರಿ ಉತ್ಸವವು ನಾನಾಕಾರ್ಯಕ್ರಮಗಳೊಡನೆ ನೆರವೇರಿರುತ್ತದೆ. (೪) **ಹೊಳೆನರಸೀಪುರದ** ಕೋಟೆ ಶ್ರೀ ಶಾರದಾಶಂಕರಾಚಾರ್ಯರ ದೇವಾಲಯದಲ್ಲಿ ನವರಾತ್ರಿ ಉತ್ಸವಗಳೂ ಲಲಿತಾತ್ರಿಶತೀಸ್ತೋತ್ರದ ವಿವರಣರೂಪವಾದ ಉಪನ್ಯಾಸಗಳೂ ನಡೆದವು.

---

# ಅಧ್ಯಾತ್ಮ ॥ ಓಂ ॥ ಪ್ರಕಾಶ



ಸಂಪುಟ ೫೬]   ವರ್ಷಕ್ಕೆ ರೂ. ೧೫-೦೦ ;  ಬಿಡಿ ಸಂಚಿಕೆಗೆ : ರೂ. ೧.೨೫   [ಸಂಚಿಕೆ ೩

ನವೆಂಬರ್-1986

(ಶ್ರೀ ಅಕ್ಷಯಸಂವತ್ಸರದ ಕಾರ್ತಿಕ)

## ಹೃದಯಾಕಾಶದಲ್ಲಿಯೇ ಕಾಮಗಳಿರುತ್ತವೆ

**ಓಂ ॥ ತದ್ಯಥಾಪಿ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರನ್ತೋ ನ ವಿಂದೇಯುರೇವಮೇವೇಮಾಃ ಸರ್ವಾಃ ಪ್ರಜಾ ಅಹರಹರ್ಗಚ್ಛನ್ತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ ಅನೃತೇನ ಹಿ ಪ್ರತ್ಯೂಢಾಃ ॥**

—ಛಾಂದೋಗ್ಯೋಪನಿಷತ್ತು ೮-೩-೨

**ಭಾವಾರ್ಥ :-** ಅಲ್ಲಿ ಹೇಗೆ ನಿಹಿತವಾಗಿರುವ ಹಿರಣ್ಯನಿಧಿಯನ್ನು ಅಕ್ಷೇತ್ರಜ್ಞರು ಮೇಲೆ ಮೇಲೆ ಸಂಚರಿಸುತ್ತಾ ಪಡೆಯದೆ ಇರುತ್ತಾರೋ ಹಾಗೆಯೇ ಈ ಸರ್ವಪ್ರಜೆಗಳೂ ದಿನದಿನವೂ ಈ ಬ್ರಹ್ಮಲೋಕವನ್ನು ಸೇರುತ್ತಿದ್ದರೂ ಪಡೆದುಕೊಳ್ಳದೆ ಇರುವರು. ಅನೃತದಿಂದಲ್ಲವೆ, ಸೆಳೆಯಲ್ಪಟ್ಟಿರುವರು ?

[ನೆಲದಲ್ಲಿ ಹೂತಿಟ್ಟ ನಿಧಿಯ ವಿಚಾರವು ತಿಳಿಯದವರು ಆ ನಿಧಿಯ ಮೇಲೆಯೇ ಓಡಾಡುತ್ತಿದ್ದರೂ ಅದನ್ನು ಪಡೆದುಕೊಳ್ಳಲಾರರೋ ಹಾಗೆಯೇ ಹೃದಯಾಕಾಶದಲ್ಲಿಯೇ ಇರುವ ಬ್ರಹ್ಮವನ್ನು ಪ್ರತಿದಿನವೂ ಸುಷುಪ್ತಿಯಲ್ಲಿ ಜೀವರು ಸೇರುತ್ತಿದ್ದರೂ ಅರಿತುಕೊಳ್ಳಲಾರದೆ ಇರುವರು- ಎಂದಭಿಪ್ರಾಯ.]

---

# ಅಧ್ಯಾತ್ಮಸಂದೇಶ

(ಗುರುಕಿಂಕರ)

## ಎಲ್ಲವನ್ನೂ ಹೃದಯಾಕಾಶದಲ್ಲಿ ಪಡೆದುಕೊಳ್ಳಬಹುದು

ಹಿಂದಿನ ಸಂದೇಶದಲ್ಲಿ ದಹರೋಪಾಸನೆಯ ಅವಾಂತರಫಲಗಳನ್ನು ತಿಳಿಸಿಕೊಟ್ಟು ಅದರ ಮಹತ್ತ್ವವನ್ನು ವರ್ಣಿಸಲಾಗಿತ್ತು. ಬೇರೆಬೇರೆಯ ದೇವತೆಗಳ ಉಪಾಸನೆಗಳು ಆಯಾ ಗೊತ್ತಾದ ಫಲಗಳನ್ನು ಕೊಡುವವಾದರೂ ಹೃದಯಾಕಾಶದಲ್ಲಿ ಬ್ರಹ್ಮವನ್ನು ಕಂಡುಕೊಂಡು ಮಾಡುವ ಚಿಂತನೆಗೆ ಅವು ಸರಿಸಮಾನವಾಗಲಾರವು. ಏಕೆಂದರೆ ಉಳಿದ ಉಪಾಸನೆಗಳೆಲ್ಲವೂ ಪರಿಚ್ಛಿನ್ನಫಲವುಳ್ಳವಾಗಿರುವವು. ದಹರಬ್ರಹ್ಮೋಪಾಸನೆಯಾದರೊ, ಸಕಲಕಾಮಾವಾಪ್ತಿಗೆ ಕಾರಣವಾಗಿರುವದು. ಆದ್ದರಿಂದ ಸಾಧಕನು ತನ್ನ ಬಹಿರ್ದೃಷ್ಟಿಯನ್ನು ಅಂತರ್ದೃಷ್ಟಿಯಾಗಿ ಪರಿವರ್ತಿಸಿಕೊಂಡು ಹೃದಯಾಂತರ್ಗತನೂ ಸರ್ವಕಾಮಪ್ರದನೂ ಆದ ತನ್ನ ಸ್ವರೂಪವೇ ಆದ ಆತ್ಮನನ್ನು ಬ್ರಹ್ಮವೆಂದು ಚಿಂತಿಸಬೇಕೆಂಬುದೇ ಉಪನಿಷತ್ತಿನ ತಾತ್ಪರ್ಯವಾಗಿರುತ್ತದೆ.

ಹೀಗೆ ಬ್ರಹ್ಮವು ಸಕಲರ ಹೃದಯದಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡಿದ್ದರೂ ಜೀವರುಗಳೇಕೆ ಶೋಕಮೋಹಗಳಲ್ಲಿ ಮುಳುಗಿರುತ್ತಾರೆ ? ಒಂದು ದೃಷ್ಟಿಯಿಂದ ನೋಡಿದರೆ ಬ್ರಹ್ಮವೇ ಜೀವರೂಪದಿಂದ ಆಯಾ ಶರೀರಗಳನ್ನು ಪ್ರವೇಶಿಸಿದೆಯಲ್ಲವೆ ? ಬ್ರಹ್ಮ, ಜೀವ- ಎಂಬ ಎರಡು ಬೇರೆಬೇರೆಯ ವಸ್ತುಗಳಿಲ್ಲವಲ್ಲ ? ಏಕೆಂದರೆ ಪ್ರತಿಯೊಬ್ಬನಿಗೂ 'ನಾನು' ಎಂದು ಅನುಭವವಾಗುವಾಗ ಅದರೊಡನೆ ಮತ್ತೊಂದು ವಸ್ತುವಿದೆಯೆಂದೇನೂ ಕಂಡುಬರುವದಿಲ್ಲವಲ್ಲ ? ನಾನು ಎಂಬುದೊಂದೇ- ಎಂಬುದು ಎಲ್ಲರಿಗೂ ಒಪ್ಪಿಗೆಯಾಗುವ ಮಾತು. ಎರಡು 'ನಾನು'ಗಳು ಇರುವದು ಸಾಧ್ಯವಿಲ್ಲ. ಆದ್ದರಿಂದ 'ನಾನೆಂಬುದು ಬ್ರಹ್ಮವೇ' ಎಂಬ ಉಪದೇಶವು ಸರಿಯಾಗಿಯೇ ಇರಬೇಕು. ಇದು ನಿಜವಾದರೆ ಪ್ರತಿಯೊಬ್ಬನೂ ಬ್ರಹ್ಮವಾಗಿ-ಬ್ರಹ್ಮವನ್ನೇ ಹೃದಯದಲ್ಲಿ ಧರಿಸಿರುವದರಿಂದ ಸಕಲಕಾಮಪ್ರಾಪ್ತಿಯೂ ಅವನ ಜನ್ಮಸಿದ್ಧವಾದ ಹಕ್ಕೆಂದೇ ಆಯಿತು. ಇಂಥ ಸನ್ನಿವೇಶದಲ್ಲಿ ಜೀವಭಾವವೂ ಅಲ್ಪತ್ವವೂ ಸಂಸಾರದ ಕೋಟಲೆಗಳೂ ಬಂಧಮೋಕ್ಷಗಳೂ ನಮಗೇಕೆ ಸಂಭವಿಸಬೇಕು? ಹೊಸದಾಗಿ ನಾವು ಹಾರ್ದಬ್ರಹ್ಮೋಪಾಸನೆಯನ್ನು ಕೈಗೊಂಡು ಪಡೆಯಬೇಕಾದದ್ದೇನಿದೆ? ಎಂದು ಸಂಶಯವುಂಟಾಗಬಹುದಾಗಿದೆ. ಇದಕ್ಕೆ ಉತ್ತರವೇನೆಂದರೆ : ಆಕ್ಷೇಪಕನ ಅಭಿಪ್ರಾಯವು ಸರಿ. ಬ್ರಹ್ಮವೆಂದರೂ- ಆತ್ಮನೆಂದರೂ- ನಾನು ಎಂದರೂ ಎಲ್ಲವೂ ಒಂದೇ. ನಿಜವಾಗಿ ನೋಡಿದರೆ ದೇವತೆಗಳೆಂಬವರೂ ಬೇರೆಯಾಗಿಲ್ಲ. 'ಆತ್ಮನೇ ಎಲ್ಲಾ ದೇವತೆಗಳೂ ಆಗಿರುವನು' ಎಂದು ಮನುಸ್ಮೃತಿಕಾರರೂ ತಿಳಿಸಿರುತ್ತಾರೆ. ಆದ್ದರಿಂದ ತಾನೇ ಬ್ರಹ್ಮವಾಗಿದ್ದುಕೊಂಡು ಯಾರನ್ನು

ತಾನೆ ಬೇಡಿಕೊಂಡು ಪಡೆಯಬೇಕಾದದ್ದಾದರೂ ಏನಿದೆ? ಹೀಗೆ ಪ್ರಶ್ನೆಯಲ್ಲೇ ಉತ್ತರವೂ ಅಡಕವಾಗಿರುತ್ತದೆ.

ಹೀಗಿದ್ದರೂ ಮಂದಮಧ್ಯಮಾಧಿಕಾರಿಗಳ ಅನುಗ್ರಹಾರ್ಥವಾಗಿ ಉಪನಿಷತ್ತು ಈಗ ದೃಷ್ಟಾಂತಪೂರ್ವಕವಾಗಿ ಬ್ರಹ್ಮಪ್ರಾಪ್ತಿಯ ವಿಷಯದಲ್ಲಿ ಆಗಿರುವ ಅಡ್ಡಿಯನ್ನು ತಿಳಿಸಿಕೊಟ್ಟು ಅದನ್ನು ಪರಿಹರಿಸಿಕೊಳ್ಳಲು ಸೂಚಿಸುತ್ತದೆ. ದೃಷ್ಟಾಂತವನ್ನು ನಾವು ಮೊದಲು ತಿಳಿದುಕೊಳ್ಳೋಣ. ಹಿಂದಿನ ಕಾಲಕ್ಕೆ ಹಿರಿಯರು ಮಕ್ಕಳು, ಮೊಮ್ಮಕ್ಕಳಿಗೂ ದಾರಿದ್ರ್ಯವು ಬಾರದಿರಲಿ- ಎಂದು ಗೋಪ್ಯವಾಗಿ ಚಿನ್ನದ ನಗ-ನಾಣ್ಯಗಳನ್ನು ನೆಲದಲ್ಲಿ ಹೂತಿಡುತ್ತಿದ್ದರು. ಏಕೆಂದರೆ ಈಗಿನ ಕಾಲದಂತೆ ಆಗ ಬ್ಯಾಂಕುಗಳಲ್ಲಿ ಠೇವಣಿಗಳ ವ್ಯವಸ್ಥೆಯಿರಲಿಲ್ಲ. ಹಾಗೆ ಹೂತಿಟ್ಟ ಯಜಮಾನನು ತನಗೆ ಅಂತ್ಯಕಾಲವು ಸಮೀಪಿಸಿದಾಗ ಕುಟುಂಬದಲ್ಲಿ ಯಾವನಾದರೂ ತನ್ನ ವಿಶ್ವಾಸಪಾತ್ರನಾದವನಿಗೆ ನಿಧಿಯ ವಿಚಾರವನ್ನು ತಿಳಿಸಿಬಿಡುತ್ತಿದ್ದನು. ಆದರೆ ಕೆಲವು ಸಂದರ್ಭಗಳಲ್ಲಿ ಯಜಮಾನನ ಸಾವು ಅನಿರೀಕ್ಷಿತವಾಗಿ ಸಂಭವಿಸಿದಲ್ಲಿ ನಿಧಿಯ ವಿಚಾರವು ಯಾರಿಗೂ ತಿಳಿಯುವ ಸಂಭವವೇ ಇರಲಿಲ್ಲ. ಇದರಿಂದ ಅಂಥವನ ವಂಶೀಕರು ಅದೇ ಮನೆಯಲ್ಲೇ ವಾಸವಿದ್ದು ಅಲ್ಲಿಯೇ ನಿಧಿಯ ಮೇಲೆಯೇ ಓಡಾಡುತ್ತಿದ್ದರೂ ನಿಧಿಯ ಅರಿವಿಲ್ಲದ್ದರ ಪ್ರಯುಕ್ತ ದರಿದ್ರರಾಗಿ ಬಾಳಬೇಕಾಗುತ್ತಿತ್ತು. ಈ ಉದಾಹರಣೆಯನ್ನು ಶ್ರುತಿಯು ಇಲ್ಲಿ ಕೊಟ್ಟಿರುತ್ತದೆ. ಇದರಂತೆಯೇ ಸಕಲಕಾಮಗಳ ಗನಿಯಾದ ಬ್ರಹ್ಮವೆಂಬ ನಿಧಿಯು ನಮ್ಮ ಆತ್ಮನೇ- ಎಂದರೆ ಸ್ವರೂಪವೇ ಆಗಿದೆ. ಅದು ನಮ್ಮನ್ನು ಬಿಟ್ಟು ಎಲ್ಲಿಯೂ ಹೋಗಿಲ್ಲ. ಎಲ್ಲಿಂದಲೂ ಹೊಸದಾಗಿ ಪಡೆದುಕೊಳ್ಳಬೇಕಾಗಿಲ್ಲ. ಹೀಗಿದ್ದರೂ ಅದರ ತಿಳವಳಿಕೆಯಿಲ್ಲದ ಮೂಢರಾದ ಜೀವರು ಅದನ್ನು ಕಳೆದುಕೊಂಡವರಂತಾಗಿ ಸಂಸಾರದುಃಖಭಾಗಿಗಳಾಗಿರುವರು. ಇದೆಂಥ ವಿಪರ್ಯಾಸವು? ಎಂದು ಇಲ್ಲಿ ತಿಳಿಸಿದೆ.

ದೃಷ್ಟಾಂತದಲ್ಲಿ ನಿಧಿಯು ಯಜಮಾನನು ಬೇರೆಯಾಗಿದ್ದು ಅನುಭವಿಸುವವರೂ ಬೇರೆಯಾಗಿರುವದರಿಂದ ಅಂಥ ಸಂದರ್ಭವು ಒದಗಬಹುದು. ಆದರೆ ಪ್ರತಿಯೊಬ್ಬ ಜೀವನ ಆತ್ಮನೇ ಆಗಿರುವ ಪರಬ್ರಹ್ಮದ ವಿಷಯದಲ್ಲಿ ಅಪ್ರಾಪ್ತಿ- ಎಂದರೇನು? ಎಂದು ಸಂಶಯವುಂಟಾಗಬಹುದು. ಇದಕ್ಕೆ ಸಮಾಧಾನವೇನೆಂದರೆ: ಉದಾಹರಣೆಯಲ್ಲಿ ವಿವಕ್ಷಿತಾಂಶವನ್ನು ಮಾತ್ರ ತೆಗೆದುಕೊಂಡಲ್ಲಿ ಸರಿಹೋಗುತ್ತದೆ. ಅದು ಯಾವದೆಂದರೆ, ವಸ್ತುವು ಇದ್ದುಕೊಂಡಿದ್ದರೂ 'ಅದು ಇದೆ' ಎಂಬ ಜ್ಞಾನವಿಲ್ಲದಿರುವದು ಹೇಗೆ ದುಃಖಕಾರಣವಾಗಿದೆಯೋ ಹಾಗೆಯೇ ಬ್ರಹ್ಮದ ವಿಷಯದಲ್ಲಿ ನಮಗೆ ತಿಳವಳಿಕೆಯಿಲ್ಲದಿರುವದೇ ಸಂಸಾರಬಂಧಕ್ಕೆ ಕಾರಣವಾಗಿರುತ್ತದೆ- ಎಂದು ಅಭಿಪ್ರಾಯ. ಪದಾರ್ಥವು ಇದ್ದಮಾತ್ರಕ್ಕೆ ಪುರುಷಾರ್ಥಸಾಧನವಾಗಲಾರದು. ಅಥವಾ ಸಂತೋಷಸಾಧನವಾಗಲಾರದು. ಉದಾಹರಣೆಗೆ ಒಬ್ಬನ ಮನೆಯಲ್ಲಿ ಒಂದು ವೀಣೆಯಿದ್ದರೆ ಸಾಲದು. ಅದನ್ನು ನುಡಿಸುವ ಕೌಶಲವೂ ವಿದ್ಯೆಯೂ

ಇದ್ದರಲ್ಲವೆ- ಆನಂದವಾದೀತು ? ಹಾಗೆಯೇ ಬ್ರಹ್ಮವಿದ್ದರೂ ಅದರ ಅರಿವು ಇಲ್ಲ ವಾದರೆ ಹೇಗೆ ಸುಖಪ್ರಾಪ್ತಿಯಾದೀತು ?

ಈಗ ಶ್ರುತಿಯು ಪ್ರತಿಯೊಬ್ಬ ಜೀವನಿಗೂ ಪ್ರತಿದಿನವೂ ಕಡ್ಡಾಯವಾಗಿ ಬ್ರಹ್ಮಪ್ರಾಪ್ತಿಯಾಗುತ್ತಿದ್ದರೂ ಅದರ ಅರಿವಿಲ್ಲವಾದ್ದರಿಂದ ಹೇಗೆ ಸಂಸಾರವೇ ಸ್ವಭಾವವೊ ? ಎಂಬಂತಾಗಿದೆ- ಎಂಬುದನ್ನು ತಿಳಿಸಲು ಹೊರಟಿದೆ. ಬ್ರಹ್ಮವು ಆತ್ಮನೇ ಎಂಬ ಉಪದೇಶವು ಕೇವಲ ಹೊಗಳಿಕೆಯ ಮಾತಲ್ಲ. ಅಥವಾ ಅದು ಮುಂದೆಂದೋ ಜನ್ಮಾಂತರಲೋಕಾಂತರಗಳಲ್ಲಿ ಆಗಬಹುದಾದ ಭವಿಷ್ಯಕಾಲಕ್ಕೆ ಸೇರಿದ ಫಲವೆಂದೋ ತಿಳಿಯಬಾರದು. ಅದು ಈಗಲೆ ಇಲ್ಲಿಯೇ ಎಲ್ಲಾ ಜೀವರು ಗಳಿಗೂ ಅನುಭವವಾಗುತ್ತಿದೆ- ಎಂಬುದನ್ನು ತಿಳಿಸಲಾಗುವದು. ಹೇಗೆಂದರೆ : ಪ್ರತಿ ಯೊಬ್ಬ ಜೀವನೂ ತನ್ನ ಜಾಗತಿಕವ್ಯಾಪಾರಗಳೆಲ್ಲವೂ ಪೂರೈಸಿದ ಅನಂತರ ವಿಶ್ರಾಂತಿಯನ್ನು ಹೊಂದುವನು. ಆಗ್ಗೆ ಅವನು ತನ್ನ ಕರಣಗಳನ್ನೆಲ್ಲ ಒಳಸೆಳೆದು ಕೊಂಡು, ಮನೋವ್ಯಾಪಾರಗಳಿಂದಲೂ ನಿವೃತ್ತನಾಗಿರುವನು. ಇಂಥ ಜೀವನು ಆಗ ಎಲ್ಲಿರುವನು ? ವಿಶ್ರಾಂತಿಯನ್ನು ಹೇಗೆ ಅನುಭವಿಸುವನು ? ಎಂಬುದೀಗ ವಿಚಾರಣೀಯವಾಗಿದೆ. ಲೌಕಿಕರನ್ನು ಕೇಳಿದರೆ ನಿದ್ರೆಯೆಂಬುದೇ ಆ ವಿಶ್ರಾಂತಿ ಸ್ಥಾನವು- ಎನ್ನುವರು. ಶಾಸ್ತ್ರವಾದರೊ, ನಿದ್ರೆಯೆಂದರೇನು ? ಆಗ ಜೀವನು ಏನಾಗಿರುವನು ? ಅವನ ಸ್ವರೂಪವು ಹೇಗಿರುವದು ? ಎಂಬಿದನ್ನು ವಿಚಾರಿಸಿ 'ನಿದ್ರೆಯಲ್ಲಿ ಜೀವನು ತನ್ನ ಸ್ವಭಾವವಾದ ಬ್ರಹ್ಮಸ್ವರೂಪದಲ್ಲಿಯೇ ಒಂದಾಗಿರು ವನು ; ಅದೇ ಬ್ರಹ್ಮಲೋಕವು'- ಎಂದು ತಿಳಿಸುತ್ತದೆ. ಇದು ಸರಿ. ಏಕೆಂದರೆ ಬ್ರಹ್ಮವೆಂದರೆ ಏಕಮೇವಾದ್ವಿತೀಯವಾದದ್ದು. ನಿದ್ರೆಯಲ್ಲಿ ಇಂಥ ಏಕತ್ವಾನುಭವ ವಿರುತ್ತದೆ. ಇದು ಸಾರ್ವತ್ರಿಕವೂ ಆಗಿದೆ. ಯಾರಿಗೂ ನಿದ್ರೆಯಲ್ಲಿ ಎರಡನೆಯ ವಸ್ತುವಿನ ಅನುಭವವಾಗಿರುವದು ಕಂಡುಬಂದಿಲ್ಲ. ಹಾಗೆ ಕಂಡುಬಂದಿದ್ದರೆ ಅದು ನಿದ್ರೆಯೇ ಅಲ್ಲ- ಅಲ್ಲವೆ ? ಆದ್ದರಿಂದ ಪ್ರತಿಯೊಬ್ಬ ಜೀವನೂ ತನಿನಿದ್ರೆಯಲ್ಲಿ ಬ್ರಹ್ಮವನ್ನು ಸೇರಿ ಅದರಲ್ಲಿ ಒಂದಾಗಿರುವನು. ಆ ಕಾಲಕ್ಕೆ ಬ್ರಹ್ಮಸ್ವರೂಪಾನಂದ ವನ್ನು ಅನುಭವಿಸುತ್ತಿರುವನು. ಅಲ್ಲಿಂದಲೇ ಎದ್ದು ಎಚ್ಚರಕ್ಕೆ ಬರುವನು. ಹೀಗಿದ್ದ ರೂ ಅವನಿಗೆ ತಾನು ಜೀವನೆಂಬ ಅಭಿಮಾನವು ಈಗ ಹೋಗದೆ ಇದ್ದು ಸುಷುಪ್ತಿ ಯಲ್ಲಾದ ಬ್ರಹ್ಮಪ್ರಾಪ್ತಿಯನ್ನು ಅರಿತುಕೊಳ್ಳದೆ ಇರುವನು. ಈ ಪರಿಸ್ಥಿತಿಯಿಂದ ಪಾರಾಗಬೇಕಾದರೆ ಅವನು ಎಚ್ಚರದಲ್ಲಿಯೇ ಶಾಸ್ತ್ರಾಚಾರ್ಯರನ್ನು ಬಳಿಸಾರಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು. ಶ್ರವಣಮನನನಿದಿಧ್ಯಾಸನಗಳಿಂದ ತನ್ನ ಆತ್ಮನು ಸಂಸಾರಿಯಲ್ಲವೆಂದೂ ನಿತ್ಯಶುದ್ಧಬುದ್ಧಮುಕ್ತವಾದ ಬ್ರಹ್ಮವೇ ತಾನೆಂದೂ ಗಟ್ಟಿಗೊಳಿಸಿಕೊಳ್ಳಬೇಕು. ಸಂಶಯನಿವಾರಣೆಗಾಗಿ ಸುಷುಪ್ತಿಯಲ್ಲಾಗುವ ಬ್ರಹ್ಮಾನುಭವವನ್ನು ಅನುಸಂಧಾನಮಾಡಿಕೊಳ್ಳಬೇಕು. ಆಗ ಅವನು ಯಾವಾಗ ಲೂ ಬ್ರಹ್ಮಲೋಕದಲ್ಲಿಯೇ ಇದ್ದುಕೊಂಡುಬಿಡುವನು. ಉಳಿದ ಜೀವರುಗಳಾ

ದರೋ ಪ್ರತಿದಿನವೂ ಬ್ರಹ್ಮಲೋಕವನ್ನು ಪಡೆಯುತ್ತಿದ್ದರೂ ತಮ್ಮ ಅಜ್ಞಾನದ ನಿಮಿತ್ತವಾಗಿ ಪಡೆಯದೆ ಇರುವರು- ಎಂದು ಶ್ರುತಿಯು ತಿಳಿಸುತ್ತಿದೆ.

ಈಗ ಶ್ರುತಿಯು ಹೃದಯಾಕಾಶದಲ್ಲಿಯೇ ಸರ್ವಕಾಮಗಳನ್ನೂ ಹೇಗೆ ಪಡೆದು ಕೊಳ್ಳಬಹುದೆಂಬುದನ್ನು ಹೃದಯಶಬ್ದನಿರ್ವಚನದಿಂದ ತಿಳಿಸುತ್ತದೆ. ಹೃದಯ ವೆಂದರೆ ಲೌಕಿಕವಾದ ವ್ಯವಹಾರದಲ್ಲಿ ಪ್ರಾಣಗಳಿಗೆ ಆಶ್ರಯವಾದ ಒಂದು ಮಾಂಸ ಪಿಂಡವೆಂದರ್ಥ. ಇಂಥ ಹೃದಯವನ್ನು ತೆಗೆದು ಬೇರೊಬ್ಬರಿಗೆ ಜೋಡಣೆಮಾಡು ವದನ್ನು ಕೂಡ ವಿಜ್ಞಾನಿಗಳು ಕಲಿತಿರುತ್ತಾರೆ. ಆದರೆ ಹೃದಿ-ಅಯಮ್ ಎಂಬ ವ್ಯುತ್ಪತ್ತಿಯಂತೆ ಹೃದಾಕಾಶದಲ್ಲಿರುವ ಈ ಆತ್ಮನನ್ನೇನೂ ಅವರು ಕಂಡುಕೊಂಡಿರು ವದಿಲ್ಲ. ಹೃದಯಶಬ್ದವು ಇಂಥ ಆತ್ಮನನ್ನು ತನ್ನಲ್ಲಿ ಧರಿಸಿರುವದರಿಂದಲೇ ಅನ್ವರ್ಥ ವಾಗಿದೆ. ಯಾರೇ ಆಗಲಿ ಆತ್ಮನನ್ನು ಹೃದಯಸ್ಥಾನದಲ್ಲಿಯೇ ಕಂಡುಕೊಳ್ಳ ಬೇಕಾಗಿದೆ. ಇದಕ್ಕೆ ಆಧಾರಸಾಗಿರುವ ಆತ್ಮನು ಪರಬ್ರಹ್ಮವೇ ಆಗಿರುವನು. ಮತ್ತು ಹೃದಯವು ಒಂದು ಉಪಾಧಿಮಾತ್ರವೇ ಹೊರತು ಅದೇ ಆತ್ಮನಲ್ಲ, ಆತ್ಮ ನನ್ನು ಅರಿಯಲು ಅದು ದ್ವಾರವಾಗಿರುತ್ತದೆ. ಇರಲಿ. ಪ್ರಕೃತದಲ್ಲಿ ಶ್ರುತಿಯು ಹೇಳುವದೇನೆಂದರೆ ಹೃದಯಶಬ್ದವನ್ನು ಆತ್ಮಶಬ್ದಕ್ಕೆ ಪರ್ಯಾಯವೆಂದೇ ಉಪಾ ಸಕನು ತಿಳಿಯಬೇಕು. ಹೃದಯದಲ್ಲಿರುವ ಆತ್ಮನು- ಎಂದರೆ ಬೋನಿನಲ್ಲಿರುವ ಸಿಂಹವು- ಎಂದಂತೆ ಮೇಲುನೋಟದ ಅರ್ಥವಾದರೂ 'ಬೊಂಬೆಯ ಶರೀರ' ಎಂಬಂತೆ ಅಭೇದದಿಂದಲೇ ಅನುಸಂಧಾನಮಾಡಬೇಕು. ಆಗ ಆತ್ಮನ ಸಾಕ್ಷಾತ್ಕಾರ ವಾಗಿ ಉಪಾಸಕನು ಬ್ರಹ್ಮದಲ್ಲಿ ಒಂದಾಗಿಬಿಡುವನು. ಇದು ಜ್ಞಾನದಿಂದ ಆಗುವ ಫಲವು. ಹೀಗೆ ಬ್ರಹ್ಮವೇ ತಾನಾದಾಗ ಎಲ್ಲಾ ಕಾಮಗಳ ಪ್ರಾಪ್ತಿಯೂ ಆಗಿಬಿಡು ವದು. 'ಎಲ್ಲಾ ಕಾಮಗಳನ್ನೂ ಬ್ರಹ್ಮದೊಡನೆ ಒಂದಾಗಿ ಜ್ಞಾನಿಯು ಅನುಭವಿ ಸುವನು' ಎಂದು ತೈತ್ತಿರೀಯಶ್ರುತಿಯಲ್ಲಿಯೂ ಇದೆ.

ಆದರೆ ಬ್ರಹ್ಮವನ್ನರಿಯಲಿ, ಅರಿತುಕೊಳ್ಳದೆ ಇರಲಿ, ಪ್ರತಿಯೊಬ್ಬ ಜೀವನೂ ಸುಷುಪ್ತಿಯಲ್ಲಿ ಹಾರ್ದಾಕಾಶದಲ್ಲಿರುವ ಬ್ರಹ್ಮವನ್ನು ಸೇರಿಯೇ ಸೇರುತ್ತಾನಲ್ಲವೆ? ಜ್ಞಾನದಿಂದಾಗುವ ವಿಶೇಷವೇನು? ಎಂದು ಯಾರಾದರೂ ಕೇಳಬಹುದು. ವಿಶೇಷ ವೇನೋ ಇದ್ದೇಇದೆ. ಅದನ್ನು ಶ್ರುತಿಯು ಹೀಗೆ ತಿಳಿಸುತ್ತಿದೆ. ಈಗ ಯಾವನು ತನ್ನ ಜೀವನಕಾಲದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಮಾಡಿ ಹಾರ್ದಬ್ರಹ್ಮವನ್ನರಿತವ ನಾಗಿ ಪ್ರತಿದಿನವೂ ಸುಷುಪ್ತಿಯಲ್ಲಿ ಬ್ರಹ್ಮವನ್ನು ಸೇರುವನೋ- ಹಾಗೆ ಸೇರುವೆ ನೆಂಬ ಅರಿವುಳ್ಳವನಾಗಿರುವನೋ- ಅಂಥವನು ದೇಹಪಾತವಾದಮೇಲೂ ಅದೇ ತಿಳಿವಳಿಕೆಯ ಬಂಡವಾಳದಿಂದ ಬ್ರಹ್ಮವನ್ನೇ ಹೊಂದಿ ಸಂಸಾರದಿಂದಲೇ ಒಮ್ಮೆಗೇ ಬಿಡುಗಡೆಯಾಗಿಬಿಡುವನು. ಇಲ್ಲವಾದರೆ ಮರಳಿ ಸಂಸಾರಕ್ಕೇ ಹಿಂತಿರುಗುವನು. ಅಜ್ಞಾನಿಗೆ ಸುಷುಪ್ತಿಯಾಗಲಿ, ದೇಹಪಾತವಾಗಲಿ, ಪ್ರಲಯವೇ ಆಗಲಿ-ಸಂಸಾರವೇ ಬೆನ್ನಂಟಿರುವದು. ಜ್ಞಾನಿಗೆ ಮಾತ್ರ ಎಲ್ಲಾ ಸ್ಥಿತಿಯಲ್ಲಿಯೂ ಬ್ರಹ್ಮವೇ ಸ್ವರೂಪ ವಾಗಿ ಕಂಡಿರುವದು, ಇದೇ ಮುಕ್ತಿಯೆನಿಸಿರುವದು- ಎಂದಭಿಪ್ರಾಯ.

---

# ಸಾಮಾನ್ಯನೀತಿ

**ಸೂನುಃ ಸಚ್ಚರಿತಃ ಸತೀ ಪ್ರಿಯತಮಾ ಸ್ವಾಮಿಾ ಪ್ರಸಾದೋನ್ಮುಖಃ**
**ಸ್ನಿಗ್ಧಂ ಮಿತ್ರಮವಂಚಕಃ ಪರಿಜನೋ ನಿಃಕ್ಲೇಶಲೇಶಂ ಮನಃ ।**
**ಆಕಾರೋ ರುಚಿರಃ ಸ್ಥಿರಶ್ಚ ವಿಭವೋ ವಿದ್ಯಾವದಾತಂ ಮುಖಂ**
**ತುಷ್ಟೇ ವಿಷ್ಟಪಕಷ್ಟಹಾರಿಣಿ ಹರೌ ಸಂಪ್ರಾಪ್ಯತೇ ದೇಹಿನಾ ॥**

ಜನಲೋಕದ ಕಷ್ಟಗಳನ್ನು ಪರಿಹರಿಸುವ ಶ್ರೀಹರಿಯು ಸಂತುಷ್ಟನಾದರೆ ಮಾನವನು ಒಳ್ಳೆಯ ನಡತೆಯ ಮಗನನ್ನೂ, ಪ್ರಿಯಳಾದ ಹೆಂಡತಿಯನ್ನೂ, ಪ್ರಸನ್ನನಾದ ಯಜಮಾನನನ್ನೂ, ಪ್ರೀತಿಪಾತ್ರನಾದ ಸ್ನೇಹಿತನನ್ನೂ, ಮೋಸಗಾರನಲ್ಲದ ಸೇವಕನನ್ನೂ, ತಾಪತ್ರಯಗಳಿಲ್ಲದ ಮನಸ್ಸನ್ನೂ, ಸುಂದರವಾದ ರೂಪವನ್ನೂ, ಶಾಶ್ವತವಾದ ಐಶ್ವರ್ಯವನ್ನೂ, ವಿದ್ಯೆಯಿಂದ ಶೋಭಿಸುವ ಮುಖವನ್ನೂ, ಪಡೆಯುತ್ತಾನೆ.

**ಪೌಲಸ್ತ್ಯಃ ಕಥಮನ್ಯದಾರಹರಣೇ ದೋಷಂ ನ ವಿಜ್ಞಾತವಾನ್**
**ರಾಮೇಣಾಪಿ ಕಥಂ ನ ಹೇಮಹರಿಣಸ್ಯಾಸಂಭವೋ ಲಕ್ಷಿತಃ ।**
**ಅಕ್ಷೈಶ್ಚಾಪಿ ಯುಧಿಷ್ಠಿರೇಣ ಸಹಸಾ ಪ್ರಾಪ್ತೋ ಹ್ಯನರ್ಥಃ ಕಥಂ**
**ಪ್ರತ್ಯಾಸನ್ನವಿಪತ್ತಿಮೂಢಮನಸಾಂ ಪ್ರಾಯೋ ಮತಿಃ ಕ್ಷೀಯತೇ ॥**

ಪುಲಸ್ತ್ಯಬ್ರಹ್ಮನ ಮೊಮ್ಮಗನಾದ ರಾವಣನಿಗಾದರೂ ಪರರ ಹೆಂಡತಿಯನ್ನು ಅಪಹರಿಸುವದು ದೋಷವೆಂದೇಕೆ ಹೊಳೆಯಲಿಲ್ಲ? ಶ್ರೀರಾಮನಾದರೂ ಚಿನ್ನದ ಜಿಂಕೆಯಿರಲಾರದೆಂಬುದನ್ನೇಕೆ ಗಮನಿಸಲಿಲ್ಲ? ಧರ್ಮರಾಜನಾದರೂ ಪಗಡೆಯಾಟದಿಂದ ಅನಿರೀಕ್ಷಿತವಾಗಿ ಕಷ್ಟವನ್ನು ಹೊಂದಿದ್ದು ಹೇಗೆ? ಪ್ರಾಯಶಃ ಸಂಕಟವು ಹತ್ತಿರದಲ್ಲೇ ಇರುವಾಗ ಮೂಢರಾಗುವ ಮನೋಧರ್ಮದವರ ಬುದ್ಧಿಯು ಕ್ಷಯವಾಗುವದಲ್ಲವೆ ?

**ಕಿಂ ಚಿತ್ರಂ ಯದಿ ರಾಜನೀತಿಕುಶಲೋ ರಾಜಾ ಭವೇದ್ಧಾರ್ಮಿಕಃ**
**ಕಿಂ ಚಿತ್ರಂ ಯದಿ ವೇದಶಾಸ್ತ್ರನಿಪುಣೋ ವಿಪ್ರೋ ಭವೇತ್ ಪಂಡಿತಃ ।**
**ತಚ್ಚಿತ್ರಂ ಯದಿ ರೂಪಯೌವನವತೀ ಸಾಧ್ವೀ ಭವೇತ್ ಕಾಮಿನೀ**
**ತಚ್ಚಿತ್ರಂ ಯದಿ ನಿರ್ಧನೋಽಪಿ ಪುರುಷಃ ಪಾಪಂ ನ ಕುರ್ಯಾತ್ ಕ್ವಚಿತ್**

ರಾಜನೀತಿಕುಶಲನಾದ ಒಬ್ಬ ರಾಜನು ಧಾರ್ಮಿಕನೂ ಆಗಿದ್ದಲ್ಲಿ ಅದೇನೂ ಆಶ್ಚರ್ಯವಲ್ಲ. ಹಾಗೆಯೇ ವೇದಶಾಸ್ತ್ರನಿಪುಣನಾದ ಒಬ್ಬ ಬ್ರಾಹ್ಮಣನು ಪಂಡಿತನೂ ಜ್ಞಾನಿಯೂ ಆಗಿದ್ದರೆ ಅದೂ ಆಶ್ಚರ್ಯವಲ್ಲ. ಆದರೆ ರೂಪಯೌವನಸಂಪನ್ನೆಯಾದ ಕಾಮಿನಿಯೊಬ್ಬಳು ಪತಿವ್ರತೆಯಾಗಿದ್ದರೆ, ಹಾಗೆಯೇ ದರಿದ್ರನಾಗಿದ್ದರೂ ಯಾವರೀತಿಯಿಂದಲೂ ಪಾಪಕಾರ್ಯಗಳನ್ನು ಮಾಡದೆ ಇರುವ ಮನುಷ್ಯನಿದ್ದರೆ ಅದು ಆಶ್ಚರ್ಯವೇ ಸರಿ– ಎನ್ನಬೇಕು.

# ಸತ್ಯಕಾಮನ ಪತ್ರಗಳು

## ಹಿಂದುಳಿದ ವರ್ಗದವರು

"ಈಚೆಗೆ ನಡೆದ ರಾಜಕೀಯ ಆಂದೋಲನದಲ್ಲಿ ಹಿಂದುಳಿದ ವರ್ಗಗಳವರು ಯಾರು ? ಎಂಬ ಬಗ್ಗೆ ದೊಡ್ಡ ಕೋಲಾಹಲವೇ ನಡೆಯಿತು. ತೀರ್ಮಾನಗಳು ಹೊರಬಿದ್ದಮೇಲೂ ಇನ್ನೂ ಅತೃಪ್ತರಾದವರು ಇದ್ದೇ ಇರುತ್ತಾರೆ. ಸಮಾಜವನ್ನು ಎಲ್ಲ ರೀತಿಯಿಂದಲೂ ಮುಂದಕ್ಕೆ ತರಲು ನಾಯಕರುಗಳು ಪ್ರಯತ್ನಪಡುತ್ತಿದ್ದರೂ ಅನೇಕರಿಗೆ ತಾವು ಹಿಂದುಳಿದವರಾಗಿರುವದೇ ಕ್ಷೇಮವೆಂಬ ಭಾವನೆಯುಂಟಾಗಿದೆ. ವರದಿಗಳ ಅಭಿಪ್ರಾಯವನ್ನು ಗ್ರಹಿಸುವದು ನನಗೆ ಇನ್ನೂ ಪೂರ್ಣವಾಗಿ ಸಾಧ್ಯವಾಗಿಲ್ಲ. ಒಟ್ಟಿನಲ್ಲಿ ಹಿಂದುಳಿದವರನ್ನು ಮುಂದಕ್ಕೆ ತಂದು ಸಮತೋಲನದಿಂದ ದೇಶವನ್ನು ಶಾಂತಿಸುಖಗಳ ಬೀಡಾಗಿ ಮಾಡುವ ಬಗೆ ಹೇಗೆ ? ತಾವೇನಾದರೂ ಈ ಬಗ್ಗೆ ಯೋಚಿಸಿರುವಿರಾ ?" ಎಂದು ಕೇಳಿ ನೀವು ಬರೆದಿರುವ ಪತ್ರವು ಬಂದಿದೆ.

ನನಗೂ ನಿಮ್ಮಂತೆಯೇ ಎಲ್ಲಾ ಜನರನ್ನೂ ಮುಂದುವರಿದವರನ್ನಾಗಿಯೇ ಮಾಡಬೇಕಾದರೆ ಏನು ಉಪಾಯವೆಂಬುದರ ಬಗ್ಗೆ ಕಳಕಳಿಯಿದೆ. ಆದರೆ ನನ್ನ ಭಾವನೆಯಂತೆ ಮುಂದುವರೆದವರನ್ನು ಹಿಂದಕ್ಕೆ ಹಾಕಿ ಹಿಂದುಳಿದವರನ್ನು ಮುಂದಕ್ಕೆ ತರುವ ಪ್ರಯತ್ನವು ಸಮಂಜಸವೆನಿಸುವದಿಲ್ಲ. ಅಲ್ಲದೆ ಹಿಂದು-ಮುಂದುಗಳನ್ನು ಅಳೆಯುವ ಮಾನದಂಡವು ಯಾವದಿರಬೇಕು ? ಎಂಬ ವಿಷಯದಲ್ಲಿಯೂ ನನ್ನ ಅಭಿಪ್ರಾಯವು ಹೀಗಿದೆ: ಮಾನವಕೋಟಿಯನ್ನೆಲ್ಲ ಈ ವಿಚಾರದಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳಬೇಕೆಂದೂ ಯಾರು ನಡೆ, ನುಡಿ, ಸಚ್ಚಾರಿತ್ರ್ಯ, ಸತ್ಯ, ಪರೋಪಕಾರ, ಭೂತದಯೆ- ಮುಂತಾದವುಗಳಲ್ಲಿ ಮುಂದಾಗಿರುವರೋ ಅಂಥವರೇ ಮುಂದುವರೆದವರೆಂದೂ ಅವರ ಆದರ್ಶವೇ ಉಳಿದ ಎಲ್ಲಾ ಹಿಂದುಳಿದವರಿಗೂ ಅನುಕರಣೀಯವೆಂದೂ ನಾನು ಭಾವಿಸುತ್ತೇನೆ. ಈ ಅಭಿಪ್ರಾಯದಂತೆ ಅಮೆರಿಕ, ರಷ್ಯ- ಮೊದಲಾದ ದೇಶಗಳವರು ವಿಜ್ಞಾನ, ಆರ್ಥಿಕಸ್ವಾತಂತ್ರ್ಯ, ರಾಜಕೀಯ ಸ್ಥಾನಮಾನಗಳಲ್ಲಿ ಎಷ್ಟೇ ಮುಂದಿದ್ದರೂ ಭಾರತದೇಶದ ಪ್ರಾಚೀನಋಷಿಗಳೊಡನೆ ಹೋಲಿಸಿದರೆ ಖಂಡಿತ ಹಿಂದುಳಿದವರಾಗಿರುತ್ತಾರೆ. ಏಕೆಂದರೆ ಅವರ ಆಲೋಚನೆಗಳೂ ಕಾರ್ಯಗಳೂ ಜಗತ್ತಿನ ಕ್ಷಯಕ್ಕೇ ಕಾರಣವಾಗಿರುವಂತೆ ಕಂಡುಬರುತ್ತಿವೆ. ಮಾರಕಾಸ್ತ್ರಗಳನ್ನು ತ್ಯಾಗಮಾಡುವದಕ್ಕಾಗಲಿ ಆ ಬಾಬಿನ ಹಣವನ್ನೆಲ್ಲ ಹಿಂದುಳಿದ ಜನರ ಕಲ್ಯಾಣಕ್ಕೆ ಬಳಸುವದಕ್ಕಾಗಲಿ ಅವರುಗಳಿಗೆ ಒಂದು ಒಪ್ಪಂದಕ್ಕೆ ಬರಲು ಸಾಧ್ಯವಾಗುತ್ತಿಲ್ಲ. ಹೀಗಿರುವಲ್ಲಿ ಅವರುಗಳನ್ನೇ ಹಿಂಬಾಲಿಸುವ ದೇಶಗಳ ಜನರೂ ಹಿಂದುಹಿಂದಕ್ಕೇ ಸರಿಯುತ್ತಿದ್ದಾರೆಂದರೆ ತಪ್ಪಲ್ಲವಷ್ಟೆ ? ಆದ್ದರಿಂದ ಭಾರತೀಯರಾದರೂ ಈ ರೀತಿಯ ಹಿಂದುಳಿಯುವಿಕೆಯಿಂದ ಪಾರಾಗಿ ಜಗತ್ತಿನ ಕ್ಷೇಮಕ್ಕಾಗಿ ಮುಂದಾಳುಗಳಾಗಲು ಮನಸ್ಸುಮಾಡಬೇಕು. ಮತಧರ್ಮಗಳನ್ನೂ ಜಾತಿಗಳ ಅಭಿಮಾನವನ್ನೂ ಬದಿಗಿಟ್ಟು ಮಾನವತೆಯನ್ನು ಎತ್ತಿಹಿಡಿದು ವಿಶಾಲ ಹೃದಯರಾಗಿ ಬಾಳುವದನ್ನು ಕಲಿಯಬೇಕು.

ಈಗ ಈ ಸಮಸ್ಯೆಯನ್ನು ಕೇವಲ ನಮ್ಮ ದೇಶಕ್ಕೆ ಮಾತ್ರ ಅನ್ವಯಿಸಿ ವಿಚಾರಮಾಡೋಣ. ನಮ್ಮಲ್ಲಿ ಜಾತಿಮತಗಳ ಕಟ್ಟುಪಾಡಿಗೆ ಒಳಪಟ್ಟ ವರ್ಣಾಶ್ರಮವ್ಯವಸ್ಥೆಯು ಈಗಲೂ ಜೀವಂತವಾಗಿರುವದು ನಿಜ. ಆದರೆ ಇದರ ವ್ಯಾಪ್ತಿಯು ಆಯಾ ವ್ಯಕ್ತಿಯು ತನ್ನ ಇಷ್ಟಾನುಸಾರ ಹಾಗೂ ಶಕ್ತಿಭಕ್ತಿಗಳಿಗೆ ಅನುಗುಣವಾಗಿ ಭಗವದಾರಾಧನೆ ಮಾಡಿ ತನ್ನ ಮಾನಸಿಕ ಔನ್ನತ್ಯವನ್ನು ಏರಿಸಿಕೊಂಡು ಉದ್ಧಾರವಾಗಲು ಸೀಮಿತವಾಗಿದೆಯೇ ಹೊರತು ರಾಜಕೀಯ, ಶಿಕ್ಷಣ, ಔದ್ಯೋಗಿಕಕ್ಷೇತ್ರಗಳಿಗೆ ಅದು ಅನ್ವಯಿಸುವದೇ ಇಲ್ಲ. ಒಂದೇ ಪಂಗಡದ ಒಂದೇ ಭಾವನೆಯ ಕೆಲವು ಜನರು ಒಂದೊಂದು ಗುಂಪಾಗಿ ತಮ್ಮನ್ನು ಇತರರು ಗುರುತಿಸಲು ಅನುಕೂಲವಾಗುವಂತೆ ಒಂದೊಂದು ಜಾತಿಯ ಹೆಸರನ್ನು ಹೊಂದಿರುತ್ತಾರೆ. ಆದರೆ ಇದು ಸಮಾಜದ ಏಳಿಗೆಗೆ ಏಕೆ ಕಂಟಕವಾಗಬೇಕೆಂಬುದು ನನಗೆ ಹೊಳೆಯುತ್ತಿಲ್ಲ. ಹಾಗೆ ಯಾರಾದರೂ ಜಾತಿಮತಗಳನ್ನು ದುರುಪಯೋಗಮಾಡಿಕೊಂಡಿದ್ದರೆ ಅದು ವಿಷಾದನೀಯವೆಂದು ಹೇಳಬೇಕಾದದ್ದೇ ಇಲ್ಲ. ಈ ವಿಷಯದಲ್ಲಿ ಜನರಾದರೂ ಎಚ್ಚತ್ತು ಕೊಳ್ಳಬೇಡವೆ? ಉದಾಹರಣೆಗೆ : ಆಸ್ಪತ್ರೆಗೆ ಹೋಗುವವನನ್ನು 'ರೋಗಿ'ಯೆಂದು ಮಾತ್ರ ಗುರುತಿಸುವರೇ ಹೊರತು ಇಂಥ ರೋಗವು ಇಂಥ ಜಾತಿಯವನಿಗೆ ಮಾತ್ರ –ಎಂಬ ನಿಯಮವಿದೆಯೆ? ಹಾಗೆಯೇ ಚಿಕಿತ್ಸಕನನ್ನು ಡಾಕ್ಟರು ಎನ್ನುವರೇ ಹೊರತು ಇಂಥ ಜಾತಿಗೆ ಅವನು ಮೀಸಲಾದ ಡಾಕ್ಟರು– ಎನ್ನುವದುಂಟೆ? ಆದ್ದರಿಂದ ಭಾರತೀಯಸಮಾಜವನ್ನು ನಿಜವಾಗಿಯೂ ಉತ್ತಮಸ್ಥಿತಿಗೆ ತರಲಿಚ್ಛಿಸುವವರು ಸಾರ್ವತ್ರಿಕವಾದ ಕೆಲಸಕಾರ್ಯಗಳಲ್ಲಿಯೂ ಅಭಿವೃದ್ಧಿಪ್ರಯತ್ನಗಳಲ್ಲಿಯೂ ಜಾತಿ–ಪಂಗಡಗಳ ಪ್ರಶ್ನೆಯನ್ನೇ ಕೈಬಿಟ್ಟು ಅರ್ಹತೆಯನ್ನು ಮಾತ್ರ ಪರಿಗಣಿಸಬೇಕು. ಇದರಿಂದ ಎಲ್ಲರಿಗೂ ಅನುಕೂಲವಾಗುವದು. ಆಯಾ ಕೆಲಸಕ್ಕೂ ಶಿಕ್ಷಣಕ್ಕೂ ಅರ್ಹರಾದವರಿಗೆ ಅವಕಾಶವನ್ನು ಕಲ್ಪಿಸಿಕೊಡುವದರಿಂದ ದೇಶವು ಮುಂದುವರಿಯುತ್ತದೆಯೇ ಹೊರತು ಹಿಂದೆಬೀಳುವದಿಲ್ಲ.

ಇನ್ನು ಹಿಂದುಳಿದವರಿಗೆ ಪ್ರೋತ್ಸಾಹವನ್ನು ನೀಡಿ ಅವರನ್ನೂ ಉದ್ಧಾರ ಮಾಡಬೇಕೆಂಬ ಬಗ್ಗೆ ಭಿನ್ನಾಭಿಪ್ರಾಯವೇ ಇಲ್ಲ. ಆದರೆ ಹಾಗೆ ಹಿಂದುಳಿದವರೆನ್ನಿಸಿಕೊಳ್ಳುವದು ತಮಗೇ ಅಪಮಾನವೆಂಬ ಭಾವನೆ ಅವರಲ್ಲಿ ಮೂಡಬೇಕು. ನಿಜವಾಗಿಯೂ ಏನೂ ಅರಿಯದ, ಏನೂ ಅವಲಂಬನೆಗಳಿಲ್ಲದ ಹಾಗೂ ಮುಂದುವರಿಯಲವಕಾಶವಿಲ್ಲದ ವರ್ಗಗಳಿಗೆ ಕೆಲವು ಕಾಲ ರಕ್ಷಣೆಯನ್ನು ನೀಡಿ ಸಹಾಯ ಮಾಡುವದು ಸರಿ. ಆದರೆ ಸಹಾಯವನ್ನು ಪಡೆಯುವವರಿಗೆ ತಾನೂ ಆದಷ್ಟು ಬೇಗ ಮುಂದುವರಿಯುವ ಆಸೆಯೂ ಪ್ರಯತ್ನಶೀಲತೆಯೂ ಇರಬೇಕು. ಇನ್ನು ಇಡಿಯ ಸಮಾಜದಲ್ಲೇ ಅಧ್ಯಾತ್ಮದೃಷ್ಟಿಯಿಂದ ಹಿಂದುಳಿದಿರುವ ನಾವುಗಳೆಲ್ಲರೂ ಈಜನ್ಮವು ಪೂರೈಸುವದರೊಳಗೇ ಮುಂದುವರೆದವರಾಗಿ ಭಗವತ್ಕೃಪೆಗೆ ಪಾತ್ರರಾಗಬೇಕೆಂದು ಹೇಳುವದೇನಿದೆ?

———

# ಆರಿಸಿದ ಅರಳುಮೊಗ್ಗುಗಳು

('ಬೆಳಕು'- ಎಂಬ ಗ್ರಂಥದಿಂದ)

'ಹೋಗಿ ಬರುತ್ತೇನೆ- ಬರುತ್ತೇನೆ'- ಮನೆಯಿಂದ ಹೊರಕ್ಕೆ ಹೋಗುವವರು ಹೇಳುವ ಮಾತಿದು. ಅದು ದಿನಚರಿ ಕೆಲಸಕ್ಕಾಗಿರಬಹುದು ; ಅಥವಾ ಇತರ ಕೆಲಸಗಳಿಗಾಗಿರಬಹುದು; ಅಥವಾ ಕಾರ್ಯನಿಮಿತ್ತ ಪರಸ್ಥಳಗಳಿಗೆ ಹೋಗುವಾಗಿನದಾಗಿರಬಹುದು. ಆದರೆ ಮನೆಯಿಂದ ಹೊರಹೋಗುವವರು 'ಹೋಗುತ್ತೇನೆ' ಎನ್ನಬೇಕೇ ಹೊರತು 'ಬರುತ್ತೇನೆ- ಹೋಗಿಬರುತ್ತೇನೆ' ಎನ್ನುವದು ಹೇಗೆ ಸರಿ ? ಎಂಬ ಪ್ರಶ್ನೆ ಈ ಮಾತುಗಳನ್ನು ಕೇಳುವವರ ಮನಸ್ಸಿನಲ್ಲಿ ಮೂಡುವದು ಸಹಜ. ಮೊದಲಬಾರಿ ಈ ಪ್ರಶ್ನೆ ಬಂದರೂ ಹತ್ತಾರುಬಾರಿ ಕೇಳಿ ಅಭ್ಯಾಸವಾದಾಗ ಇದೊಂದು ರೂಢಿ ಎಂದುಕೊಂಡು ಸುಮ್ಮನಾಗಬಹುದು. ಆದರೆ ಏಕೆ ಬೆಳೆಯಿತು ರೂಢಿ ? ಇದರಲ್ಲಿ ನ್ಯಾಯವಾದ ವಿಷಯವೇನಾದರೂ ಇದೆಯೆ ? ಎಂದು ವಿಚಾರಿಸುವದೇನೂ ತಪ್ಪಲ್ಲ.

ಮನೆಯು ತನ್ನ ನೆಮ್ಮದಿ ಮತ್ತು ಸುಖಕ್ಕಾಗಿ ಮಾಡಿಕೊಂಡಿರುವ ಸ್ಥಳ. ಅಲ್ಲಿಂದ ಹೊರಕ್ಕೆ ಹೋಗುವಾಗ ಎಲ್ಲಿಗೆ ಹೋದರೂ ಮತ್ತೆ ಮನೆಗೆ ಹಿಂದಿರುಗಬೇಕು- ಎಂಬ ನೆನಪಿನೊಡನೆ ಈ ಮಾತು ಹೊರಟಿದೆ. ಹೊರಕ್ಕೆ ಹೋಗುವದೊಂದೇ ಉದ್ದೇಶವಲ್ಲ. ಕಾರ್ಯನಿಮಿತ್ತವಾಗಿ ಅನಿವಾರ್ಯವಾಗಿ ಹೊರಹೊರಟರೂ ಮತ್ತೆ ಮನೆ ಸೇರಿಕೊಳ್ಳುವದೇ ಪ್ರಧಾನ. ಹೋಗುವದು ಮತ್ತೆ ಬರುವದಕ್ಕಾಗಿ. ಆದ್ದರಿಂದ ಹೋಗಿಬರುತ್ತೇನೆ- ಎಂಬಲ್ಲಿ ಬರುವತ್ತ ಒತ್ತು ಜಾಸ್ತಿಯಾಗಿ ಬರುತ್ತೇನೆ ಎಂಬ ರೂಢಿಯು ಸಹಜವಾಗಿದೆ.

ದೇಹವನ್ನು ಕಾಪಾಡಿಕೊಳ್ಳುವದಕ್ಕೆ ಹೇಗೆ ಹೊರಗೆ ಒಂದು ಮನೆಯಿದೆಯೋ ಹಾಗೆ ದೇಹವೇ ಜೀವನು ವಾಸಮಾಡುವ ಒಂದು ಮನೆಯಾಗಿದೆ. ಹಾಗೆಯೇ ಜೀವನಿಗೆ ತನ್ನ ನೆಲೆಯಾದ ತನ್ನ ಸ್ವರೂಪದ ಸೊಬಗನ್ನು ಅನುಭವಿಸಿಕೊಳ್ಳಲು ಒಂದು ಮನೆಯುಂಟು. ಆ ಒಳಮನೆಯೇ ಶಾಂತಿಧಾಮವು. ಜೀವನು ಲೋಕ ವ್ಯವಹಾರಕ್ಕಾಗಿ ಇಂದ್ರಿಯಗಳ ಸಂಪರ್ಕಕ್ಕೆ ಬರುವದೇ ಹೊರಬರುವಿಕೆಯು. ಅವುಗಳಿಂದ ಹಿಂತಿರುಗಿ ತನ್ನ ನೆಲೆಯನ್ನು ಸೇರುವದೇ ಮನೆಸೇರುವಿಕೆಯು. ಇಂದ್ರಿಯಗಳ ಕ್ಷೇತ್ರಕ್ಕೆ ಹೊರಬರುವ ಜೀವನು ಹಿಂತಿರುಗಿ ತನ್ನ ಒಳಮನೆಯನ್ನು ಸೇರಬೇಕೆಂಬ ನೆನಪನ್ನು ಮರೆಯದೆ ಇರಬೇಕು. ಹೊರಗಿನ ಅನುಭವಗಳನ್ನು ಪಡೆದ ನಂತರ ಮತ್ತೆ ನೆಲೆಗೇ ಹಿಂತಿರುಗಲೂ ಬೇಕು. ಹಾಗಿಲ್ಲದೆ ಹೊರಗೇ ಅಲೆಯುತ್ತಾ ಮನೆತಪ್ಪಿದ ಅಲೆಮಾರಿಯಾಗಬಾರದು. ತಾನು ತನ್ನ ನೆಮ್ಮದಿಗಾಗಿ ಹಿಂದಿರುಗಬೇಕಾದ ಒಂದು ಶಾಂತಿಧಾಮವಿದೆ- ಎಂಬತ್ತ ಗಮನ ಸೆಳೆಯುವ ಜಾಣನುಡಿಯಿದು- ಎಂದು ಬಲ್ಲವರು ತಿಳಿಸುತ್ತಾರೆ.

---

# ಜಲತತ್ತ್ವ

(ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು)

ಭೂಮಿಯ ಮೇಲಿರುವ ಪ್ರಾಣಿಗಳಿಗೆ ನೀರಿನ ಬೆಲೆಯು ಬಹಳ ಹೆಚ್ಚು. ಆಕಾಶದಿಂದ ಮಳೆಯು ಮೋಡಗಳ ರೂಪದಿಂದ ಇಳಿದುಬರುವದು ಪರಮಾತ್ಮನು ಅಪಾರಕರುಣೆಯಿಂದ ಅವತರಿಸಿ ಭಕ್ತರನ್ನು ಉದ್ಧಾರಮಾಡುವದರ ಚಿಹ್ನೆಯಾಗಿರುವದು. ಮಳೆಯು ಬೀಳುತ್ತಿರುವಾಗ ಆನಂದಿಸದ ಪ್ರಾಣಿಗಳಿಲ್ಲ. ಮರಗಿಡಗಳು ಮಳೆಯ ನೀರಿನ ಅಭಿಷೇಕದಿಂದ ನಳನಳಿಸುತ್ತಾ ಗಾಳಿಯ ಹೊಡೆತಕ್ಕೆ ತಲೆದೂಗುತ್ತಿರುವವು. 'ಇನ್ನುಮೇಲೆ ಭೂಮಿಯ ಮೂಲಕ ನಮಗೆ ಸಾರವಾದ ಆಹಾರವು ದೊರಕುವದು, ನಾವು ಭೂಮಿಯೊಳಕ್ಕೆ ಬೇರುಬಿಟ್ಟುಕೊಂಡು ಸ್ಥಿರವಾಗಿ ನಿಲ್ಲಬಹುದು' ಎಂದು ಅವು ನಲಿಯುತ್ತಿರುವಂತೆ ತೋರುವದು. ಪ್ರಾಣಿಗಳೆಲ್ಲವೂ 'ಭೂಮಿಯಮೇಲೆ ನಮ್ಮ ಆಹಾರವು ಯಥೇಷ್ಟವಾಗಿ ಬೆಳೆಯುವದು' ಎಂದು ಸಂತೋಷದಿಂದ ನೆಗೆದಾಡುವವು ; ಧ್ವನಿಗೈಯುವವು. ಮನುಷ್ಯನು 'ನನ್ನ ಬಾಳು ಇನ್ನು ಸರಸವಾಗುವದು' ಎಂದು ಹೆಮ್ಮೆಪಡುವನು.

ನದಿಗಳು ನೀರು ತುಂಬಿಕೊಂಡು ಕಲಕಲಧ್ವನಿಯನ್ನು ಮಾಡುತ್ತಾ ಸಂತೋಷದಿಂದ ಸಮುದ್ರದತ್ತ ಓಡುತ್ತಿರುವವು. ಬೇಡುವವರಿಗೆ ಕಾಲುವೆಗಳ ಮೂಲಕ ಪೈರುಪಚ್ಚೆಗಳಿಗೆ ಜೀವದಾನವನ್ನು ಗೈಯುತ್ತಿರುವವು. ಅವು ಯಾವ ಬೆಟ್ಟದಮೇಲೆ ಹುಟ್ಟಿರುವವೋ ಅದನ್ನು ತಿಳಿಯದ ಸಾಮಾನ್ಯರೂ ಅವುಗಳ ಉಪಕಾರಲಾಭವನ್ನು ಪಡೆಯುವದಕ್ಕೆ ಅವಕಾಶವನ್ನೀಯುವವು. ಸ್ನಾನಮಾಡಿದವರ ಮೈಕೊಳೆಯನ್ನು ತೊಳೆಯುವವು. ಮನಸ್ಸಿನ ಪಾಪವನ್ನು ಹೋಗಲಾಡಿಸುವವು. ತಮ್ಮ ದಡದಲ್ಲಿ ಕುಳಿತು ತಪಸ್ಸುಮಾಡಿದ ಋಷಿಗಳ ಸ್ಮರಣೆಯನ್ನು ಕೊಡುವವು. ತೀರ್ಥಕ್ಷೇತ್ರಗಳಿಗೆ ಬಂದು ಕೃತಕೃತ್ಯರಾಗಿರಿ– ಎಂದು ನುಡಿಯುವಂತೆ ಕಂಡುಬರುತ್ತಿರುವದು.

ಭೂಮಿಯಲ್ಲಿ ಒಳಗೆ ಹರಿದಾಡುತ್ತಿರುವ ನೀರಿನ ನಿಧಿಯು ಮಾನವನ ನೀರಡಿಕೆಯನ್ನು ಹೋಗಲಾಡಿಸುವದಕ್ಕೆ ಸಿದ್ಧವಾಗಿದೇನೆಂದು ಹೇಳುತ್ತಿರುವದು. ಅಲ್ಲಲ್ಲಿ ತೋಡಿದ ಭಾವಿಗಳು, ಚಿಮ್ಮುತ್ತಿರುವ ಚಿಲುಮೆಗಳು, ಕೆರೆಗಳು, ಕಟ್ಟೆಗಳು– ಮುಂತಾದವು ಪರಮಾತ್ಮನ ವಿಶಾಲವಾದ ಪ್ರೇಮಪೂರ್ಣಹೃದಯವನ್ನು ನೆನಪಿಗೆ ತರುತ್ತಿರುವವು.

ನಮಗೆ ಗೊತ್ತಿರುವ ಭೂಭಾಗಕ್ಕಿಂತಲೂ ನೀರಿನ ಭಾಗವೇ ಹೆಚ್ಚಾಗಿರುವದು. ನಮಗೆ ಆಹಾರವಿಲ್ಲದಿದ್ದರೂ ಕೆಲವುಕಾಲ ಸಾಗೀತು, ಕುಡಿಯುವ ನೀರಿಲ್ಲದಿದ್ದರೆ ಎಂದಿಗೂ ಆಗದು. ಪರಮಾತ್ಮನು ರಸರೂಪನೇ, ರಸವನ್ನು ಸವಿದೇ ಜೀವನು ಆನಂದಿಸುವನು–ಎಂಬ ತತ್ತ್ವವು ನೀರಿನ ಭಾವನೆಯಿಂದ ನಮಗೆ ಲಭಿಸುತ್ತದೆ.

———

# ಗ್ರಂಥಪರಿಚಯ

**೧. ತೇಜಸ್ಸು ಶಕ್ತಿ ಮತ್ತು ಅರಿವು ೨. ಜಪಯೋಗ ೩. ಶ್ರೀ ಸ್ವಾಮಿ ಚಿದಾನಂದರ ದಿವ್ಯಜೀವನಪ್ರದೀಪ :** ಈ ಮೂರು ಗ್ರಂಥಗಳ ಪ್ರಕಾಶಕರು : ಎಂ. ಜೆ. ಕೋದಂಡರಾಮಶೆಟ್ಟರು, ಪ್ರಧಾನಕಾರ್ಯದರ್ಶಿ, ಅಖಿಲ ಕರ್ನಾಟಕ ಸ್ವಾಮಿ ಶಿವಾನಂದ ಜನ್ಮಶತಮಾನಮಹೋತ್ಸವ ಸಭಾ, ಅಂಚೆಪೆಟ್ಟಿಗೆ 94, 'ಧರ್ಮದೀಪ' ಚೊಕ್ಕಣ್ಣಬೀದಿ, ಚಿಕ್ಕಮಗಳೂರು. ಪುಟಗಳು : ಕ್ರೌನ್ ಕ್ರಮವಾಗಿ ೧೦೮ ; ೧೩೨ ; ೯೮ ; ಬೆಲೆ ನಮೂದಿಸಿಲ್ಲ.

ಈ ಮೂರು ಗ್ರಂಥಗಳನ್ನೂ ಹೃಷೀಕೇಶದ ಶ್ರೀಶಿವಾನಂದಸ್ವಾಮಿಗಳವರ ಜನ್ಮಶತಮಾನೋತ್ಸವದ ಅಂಗವಾಗಿ ಜ್ಞಾನಯಜ್ಞಪ್ರಸಾರಮಾಲಿಕೆಯ ಕುಸುಮಗಳಾಗಿ ಪ್ರಕಟಿಸಲಾಗಿದೆ. ಇವುಗಳ ಪ್ರಕಟನ ವೆಚ್ಚವನ್ನೆಲ್ಲ ಬೆಂಗಳೂರಿನ ಸುಪ್ರಸಿದ್ಧ ಕೈಗಾರಿಕೋದ್ಯಮಿಗಳೂ ಗುರುಭಕ್ತರೂ ಆದ ಖೋಡೆ ಬಂಧುಗಳು ವಹಿಸಿಕೊಂಡು ಪರಮೋಪಕಾರವನ್ನು ಮಾಡಿರುತ್ತಾರೆ. ಪೂಜ್ಯ ಶ್ರೀ ಶಿವಾನಂದಸರಸ್ವತೀಸ್ವಾಮಿಗಳವರು ದಕ್ಷಿಣಭಾರತದ ತಾಮ್ರಪರ್ಣಿತೀರದ ಪಟ್ಟಮಡೈ ಗ್ರಾಮದಲ್ಲಿ ಜನ್ಮತಾಳಿ, ಹೃಷೀಕೇಶದ ಗಂಗಾತಟದಲ್ಲಿ ನೆಲಸಿ ತಮ್ಮ ಜ್ಞಾನಗಂಗಾಪ್ರವಾಹದಿಂದ ಭಕ್ತರನ್ನು ಉದ್ಧರಿಸುತ್ತಾ ಭಾರತದೇಶದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲಿಯೂ ಜ್ಞಾನಪಿಪಾಸುಗಳ ಜ್ಞಾನದಾಹವನ್ನು ತಣಿಸಿದ ವಿಭೂತಿಪುರುಷರು. ಅವರು ಸ್ಥಾಪಿಸಿರುವ ದಿವ್ಯಜೀವನಸಂಘ (Divine Life Society)ವು ಜಗತ್ಪ್ರಸಿದ್ಧವಾಗಿದೆ. ಈ ಮಹನೀಯರು ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವ ನೂರಾರುಗ್ರಂಥಗಳು ಆಧ್ಯಾತ್ಮಿಕಪ್ರಪಂಚದಲ್ಲಿ ಪ್ರವೇಶಿಸುವ ಹಾಗೂ ಆ ಮಾರ್ಗದಲ್ಲಿ ನಡೆಯುವ ಸಾಧಕರಿಗೆ ದಾರಿದೀಪಗಳಾಗಿವೆ. ಇಂಥ ಮಹಾಗ್ರಂಥಗಳ ಸವಿಯನ್ನು ಕನ್ನಡಿಗರೂ ಸವಿಯಲೆಂದು ಈ ಸಂದರ್ಭದಲ್ಲಿ ಮೇಲೆ ಹೆಸರಿಸಿರುವ ಮೊದಲನೆಯ ಎರಡು ಗ್ರಂಥಗಳನ್ನು ಕನ್ನಡಕ್ಕೆ ಅನುವಾದಮಾಡಿಸಿ ಸಭೆಯವರು ಪ್ರಕಟಿಸಿರುತ್ತಾರೆ. ಮೊದಲನೆಯ ಪುಸ್ತಕದಲ್ಲಿ ತೇಜಸ್ಸು- ಎಂಬ ವಿಷಯದಲ್ಲಿ ೪೬ ಸೂಕ್ತಿಗಳಿವೆ. ಶಕ್ತಿ ಎಂಬ ವಿಷಯದಲ್ಲಿ ೪೦ ಸೂಕ್ತಿಗಳಿವೆ. ಅರಿವು ಎಂಬ ವಿಷಯದಲ್ಲಿ ೩೯ ಸೂಕ್ತಿಗಳಿವೆ. ಸೂಕ್ತಿಗಳೆಲ್ಲವೂ ತುಂಬ ಸರಳವಾಗಿವೆ. ಪ್ರಾರಂಭಿಕ ಓದುಗರಿಗೆ ಬೋಧಪ್ರದವಾಗಿವೆ. ಜಪಯೋಗ- ಎಂಬ ಎರಡನೆಯ ಗ್ರಂಥದಲ್ಲಿ ಜಪನಿಯಮಗಳು, ಆಹಾರಾದಿಗಳ ವಿವರಗಳು, ಗಾಯತ್ರ್ಯಾದಿ ಮಂತ್ರಗಳ ಮಹಿಮೆ, ಲಿಖಿತಜಪದ ಹೆಚ್ಚುಗಾರಿಕೆ, ಮಾನಸಿಕಜಪದ ವಿಚಾರ, ಜಪದಿಂದ ಮುಕ್ತರಾದ ಕೆಲವು ಸಾಧುಸಂತರ ಪರಿಚಯ-ಇತ್ಯಾದಿ ಮನನೀಯವಾದ ವಿಷಯಗಳಿವೆ. ಸಾಧಕರು ಅವಶ್ಯವಾಗಿ ಓದಬೇಕಾದ ಪುಸ್ತಕಗಳಿವು- ಎಂಬುದರಲ್ಲಿ ಸಂದೇಹವಿಲ್ಲ.

ಮೂರನೆಯ ಗ್ರಂಥವು ದಿವ್ಯಜೀವನಸಂಘದ ಈಗಿನ ಅಧ್ಯಕ್ಷರೂ ಶ್ರೀಶಿವಾನಂದರ ಪ್ರಿಯಶಿಷ್ಯರೂ ಆದ ಶ್ರೀ ಚಿದಾನಂದಜಿಯವರ ಜೀವನಪರಿಚಯವನ್ನೂ ಉಪದೇಶಗಳನ್ನೂ ಒಳಗೊಂಡಿದೆ. ಶ್ರೀಯುತರು ಜೋಹಾನ್ನೀಸ್ ಬರ್ಗ್, ಡ್ರಾಂಜೆನ್ (ಬೆಲ್ಜಿಯಂ) ಫ್ರಾಂಕ್‌ಫರ್ಟ್ (ಪ. ಜರ್ಮನಿ) ಡರ್ಬಾನ್ (ದ. ಅಮೆರಿಕ) ಬಿಚ್ (ಫ್ರಾನ್ಸ್)- ಮುಂತಾದ ನಗರಗಳಲ್ಲಿ ನೀಡಿದ ಅಮೋಘ ಉಪನ್ಯಾಸಗಳ ಕನ್ನಡಾನುವಾದಗಳು ಇಲ್ಲಿ ಕಂಗೊಳಿಸುತ್ತಿವೆ. ಇವುಗಳಲ್ಲಿ ವಿಶ್ವಪ್ರೇಮ, ಜ್ಞಾನನಿಷ್ಠೆಗಳ ಸಮ್ಮಿಳಿತಜೀವನಾದರ್ಶಗಳಿವೆ. ದಿವ್ಯಜೀವನವನ್ನು ನಡೆಸಲೆಳಸುವ ಸಾಧಕರಿಗೆ ದಾರಿದೀಪಗಳಾಗಿವೆ-ಎಂದು ತಿಳಿಸಲು ಸಂತೋಷವಾಗಿದೆ.

**೪. ಭಾಮತಿ :** ಶ್ರೀ ಜಗದ್ಗುರು ಚಂದ್ರಶೇಖರಭಾರತೀ ಸ್ಮಾರಕ ಮಹಾವಿದ್ಯಾಲಯದ ಇಪ್ಪತ್ತನೆಯ ವರ್ಷದ ಸಂಚಿಕೆ. ಪ್ರಕಾಶಕರು : ಸಂಪಾದಕ ಮಂಡಳಿಯವರು ; ಪುಟಗಳು ೧೨೮.

ಪ್ರತಿವರ್ಷದಂತೆ ಈ ವರ್ಷವೂ ಕಾಲೇಜು ಮಂಡಳಿಯವರು ಹೊರಡಿಸಿರುವ ಈ ಸಂಚಿಕೆಯು ಸಂಸ್ಥೆಯ ಪ್ರಗತಿ ಹಾಗೂ ಇತರ ಚಟುವಟಿಕೆಗಳು, ಆಡಳಿತದರ್ಶನ, ವಿದ್ಯಾರ್ಥಿಗಳ ಪುರೋಭಿವೃದ್ಧಿ, ಕ್ರೀಡಾಚಟುವಟಿಕೆಗಳೇ ಮುಂತಾದ ವಿವರಗಳನ್ನು ಒಳಗೊಂಡಿದೆ. ಈ ಸಂಚಿಕೆಯು ದಿ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರಿಗೆ ಅರ್ಪಿತವಾಗಿದೆ. ಡಾ॥ ಹೆಚ್. ತಿಪ್ಪೇರುದ್ರಸ್ವಾಮಿಗಳವರೊಡನೆ ನಡೆಯಿಸಿರುವ ಸಂದರ್ಶನವಿವರಗಳೂ ವಿಜ್ಞಾನ, ಇತಿಹಾಸ, ರಾಜಕೀಯವ್ಯವಸ್ಥೆಗಳು, ವಿದ್ಯಾನಿಲಯಗಳು- ಮುಂತಾದ ವಿಷಯಗಳಲ್ಲಿ ವಿದ್ಯಾರ್ಥಿಗಳು ಬರೆದಿರುವ ಆಯ್ದ ಲೇಖನಗಳೂ ಇವೆ. ವಿಚಾರವೇದಿಕೆವಿಭಾಗದಲ್ಲಿ ವಿದ್ಯಾರ್ಥಿಗಳ ಅನಿಸಿಕೆಗಳನ್ನು ಕುರಿತ ಬರಹಗಳೂ ಕವಿತೆಗಳೂ ಸಂಚಿಕೆಯನ್ನಲಂಕರಿಸಿವೆ. ಕಳೆದ ಐದು ವರ್ಷಗಳಿಂದಲೂ ಸತತವಾಗಿ ಈ ಸಂಚಿಕೆಯು ವಿಶ್ವವಿದ್ಯಾಲಯದ ವಿಶೇಷ ಮನ್ನಣೆಯನ್ನು ಗಳಿಸುತ್ತಿರುವದು ಹೆಮ್ಮೆಯ ಸಂಗತಿ. ಕೆಲವು ಇಂಗ್ಲಿಷ್ ಲೇಖನಗಳೂ ಒಂದೆರಡು ಹಿಂದಿ ಲೇಖನಗಳೂ ಸಂಚಿಕೆಯಲ್ಲಿ ಸೇರಿವೆ. ಆದರೆ ಸಂಸ್ಕೃತಸಾಹಿತ್ಯ, ಭಾಷಾಧ್ಯಯನ, ಪ್ರಚಾರಗಳ ಬಗ್ಗೆ ಯಾವ ಲೇಖನಗಳಲ್ಲಿಯೂ ಏನೂ ಪರಾಮರ್ಶೆಗಳಿಲ್ಲ. ಶಿಕ್ಷಣಕ್ಷೇತ್ರದಲ್ಲಿ ಸಂಸ್ಕೃತವನ್ನು ಅನಾದರಮಾಡಿದಂತೆಲ್ಲ ನಾವು ಪರಕೀಯರಾಗುವದು ನಿಶ್ಚಿತ. ಭಾರತದೇಶದ ಅಮೂಲ್ಯ ಸಂಪತ್ತಾದ ಅಧ್ಯಾತ್ಮವಿದ್ಯೆಗೆ ದ್ವಾರವಾದ ಈ ಅಮರಭಾಷೆಯ ಬಗ್ಗೆ ಸಂಸ್ಥೆಯ ಚಟುವಟಿಕೆಗಳಲ್ಲಿ ಕಿಂಚಿತ್ತಾದರೂ ಸ್ಥಾನವು ಸಿಗಬೇಕು. ಮುಂದಿನ ಪೀಳಿಗೆಗೂ ಇದರಿಂದ ಲಾಭವಿದೆ. ಸಂಚಿಕೆಯ ಮುದ್ರಣ, ವಿನ್ಯಾಸ, ಅಚ್ಚುಕಟ್ಟುಗಳು ಇದರ ಕಳೆಯನ್ನು ಹೆಚ್ಚಿಸಿವೆ. ಸುಸ್ವಾಗತ.

**೫. ಅಮೃತಸಂದೇಶ :** (ಸಂಕಲನಗಳು) ಶ್ರೀಸ್ವಾಮಿ ಶಿವಾನಂದರ ಜನ್ಮಶತಾಬ್ದಿಜ್ಞಾನಯಜ್ಞಪ್ರಸಾರ ಗ್ರಂಥಮಾಲೆ ; ಪ್ರಕಾಶಕರು : ದಿವ್ಯಜೀವನಸಂಘ, ವಿಜಯನಗರ ಶಾಖೆ, ಹುಬ್ಬಳ್ಳಿ–32. ಪುಟಗಳು ಕ್ರೌನ್ ೧೯೪ ; ಬೆಲೆ ೮ ರೂ.

ಹುಬ್ಬಳ್ಳಿಯ ದಿವ್ಯಜೀವನಸಂಘದವರು ಪ್ರಕಟಿಸುತ್ತಿರುವ ಮೂರನೆಯ ಗ್ರಂಥವಿದು. ಇದರಲ್ಲಿ 'ಡಿವೈನ್ ಲೈಫ್' ಮಾಸಪತ್ರಿಕೆಯಲ್ಲಿ ಅಚ್ಚಾಗಿದ್ದ ಶ್ರೀಶಿವಾನಂದರ ಲೇಖನಗಳನ್ನು ಕನ್ನಡಿಸಿಕೊಡಲಾಗಿದೆ. ಮೂವತ್ತಕ್ಕೂ ಮೀರಿದ ಈ ಲೇಖನಸೂಕ್ತಿಗಳು ಬೋಧಪ್ರದವಾಗಿಯೂ ಉಪಯುಕ್ತವಾಗಿಯೂ ಇವೆ. ಶಾಸ್ತ್ರೀಯವಿಚಾರಸರಣಿಯಾಗಲಿ, ಪೂರ್ವಪಕ್ಷಸಿದ್ಧಾಂತಗಳಾಗಲೀ ಇಲ್ಲದ ಸರಳವಾದ ಈ ಬರಹಗಳು ಜನಸಾಮಾನ್ಯರನ್ನೆಲ್ಲ ಆಕರ್ಷಿಸಬಲ್ಲವು. ಸಂಘದವರ ಈ ಸ್ತುತ್ಯಪ್ರಯತ್ನಕ್ಕೆ ನಮ್ಮ ಹಾರ್ದಿಕ ಅಭಿನಂದನೆಗಳು.

**೬. ಗಾಯತ್ರೀಸಹಸ್ರನಾಮ :** ಸಂಗ್ರಾಹಕರು ಮತ್ತು ಪ್ರಕಾಶಕರು : ಶ್ರೀ ಬಿ. ಗೌಡಗೆರೆ ಸೀತಾರಾಮಶಾಸ್ತ್ರಿಗಳು, 1475, ಅಶೋಕನಗರ, ಮಂಡ್ಯ ; ಪುಟಗಳು : ಕ್ರೌನ್ ೪೬ ; ಬೆಲೆ ಉಚಿತ.

ಈ ಪುಸ್ತಕದಲ್ಲಿ ಗಾಯತ್ರೀಸಹಸ್ರನಾಮಸ್ತೋತ್ರವನ್ನೂ ನಾಮಾವಳಿಯನ್ನೂ ಪ್ರತ್ಯೇಕವಾಗಿ ಕೊಡಲಾಗಿದೆ. ಅಷ್ಟೋತ್ತರಶತನಾಮಾವಳಿಯೂ ಇದೆ. ಕೆಲವು ಅಚ್ಚಿನ ತಪ್ಪುಗಳು ಉಳಿದಿವೆ. ಆಸಕ್ತಮಹನೀಯರು ಈ ಗ್ರಂಥದಿಂದ ಲಾಭವನ್ನು ಪಡೆಯಬಹುದು.

# ಜೀವನ ಜ್ಞಾನೈಶ್ವರ್ಯತಿರೋಭಾವಗಳು

(ಸಂಪಾದಕ)

ಹಿಂದಿನ ಲೇಖನದಲ್ಲಿ ಜೀವಾತ್ಮನ ಅವಸ್ಥಾಭೇದಗಳನ್ನು ಪ್ರಸ್ತಾಪಿಸಿ ಎಚ್ಚರ, ಕನಸುಗಳ ಪರೀಕ್ಷೆಯಿಂದ ಸಿದ್ಧವಾಗುವ ಅಸಂಗತ್ವ, ಏಕತ್ವ, ಶುದ್ಧತ್ವಾದಿಧರ್ಮಗಳಿಂದ ಜೀವನು ಪರಮೇಶ್ವರನೇ ಸರಿ ; ಆದರೆ ಜ್ಞಾನೈಶ್ವರ್ಯಗಳು ಅವಿದ್ಯಾವಶದಿಂದ ಮುಚ್ಚಿಹೋಗಿರುತ್ತವೆ- ಎಂದು ತಿಳಿಸಲಾಗಿತ್ತು. ಇದೇ ವಿಚಾರವನ್ನು ಈಗ ಇನ್ನೂ ಸ್ವಲ್ಪ ವಿವರವಾಗಿ ಚರ್ಚಿಸಲಾಗುವದು. ಜೀವನು ಪರಮಾತ್ಮನ ಅಂಶವೇ ಆಗಿದ್ದಲ್ಲಿ ಅವನ ಜ್ಞಾನೈಶ್ವರ್ಯಗಳು ತಿರಸ್ಕೃತವಾಗಬಾರದಲ್ಲವೆ ? ಬೆಂಕಿಯ ಕಿಡಿಯು ಬೆಂಕಿಯೇ ಆಗಿದ್ದು ಸುಡುತ್ತದೆಯಲ್ಲವೆ? ಅದಕ್ಕೇನೂ ಅಡಚಣೆಗಳಿಲ್ಲವಾದರೆ ಜೀವನಿಗೇಕೆ ಉಂಟಾಗಬೇಕು ? ಹಾಗೆ ಅಡಚಣೆಗಳು ಇರುವದೇ ಆದರೆ ಅವನು ಪರಮಾತ್ಮನಲ್ಲವೆಂದೇಕೆ ಹೇಳಬಾರದು ? ಎಂದರೆ ಸೂತ್ರಕಾರರು ಹೀಗೆ ಉತ್ತರಿಸುತ್ತಾರೆ : 'ದೇಹಯೋಗಾದ್ವಾ ಸೋಽಪಿ' (ಅದೂ ದೇಹಯೋಗದಿಂದಲೇ ಸರಿ). ಈ ಸೂತ್ರದ ಅಭಿಪ್ರಾಯವನ್ನು ಶ್ರೀಶಂಕರಾಚಾರ್ಯರು ಹೀಗೆ ವಿವರಿಸುತ್ತಾರೆ. "ನಿಜವೇ ; ಆದರೆ ಜ್ಞಾನೈಶ್ವರ್ಯಗಳ ಮರೆಯಾಗುವಿಕೆಯೂ ಸಹ ದೇಹೇಂದ್ರಿಯಮನೋಬುದ್ಧಿಗಳ ಸಂಬಂಧದಿಂದಲೇ"- ಎಂದಭಿಪ್ರಾಯ. ಹೇಗೆಂದರೆ ಬೆಂಕಿಯ ದೃಷ್ಟಾಂತವನ್ನೇ ವಿಚಾರಮಾಡೋಣ. ಬೆಂಕಿಯು ಸುಡುವದು ಸ್ವಭಾವವೇ ಆದರೂ ಅದು ಇನ್ನೂ ಪ್ರತ್ಯಕ್ಷವಾಗಿ ತೋರಿಕೊಳ್ಳದೆ ಕಟ್ಟಿಗೆಯಲ್ಲೇ ಅಡಗಿರುವಾಗ ತನ್ನ ಕೆಲಸವನ್ನು ಮಾಡಲಾರದು. ಏಕೆಂದರೆ ಕಟ್ಟಿಗೆಯನ್ನು ಮುಟ್ಟಿದಾಗ ಯಾರಿಗೂ ಸುಡುವ ಅನುಭವವಾಗಿಲ್ಲ. ಆದ್ದರಿಂದ ಕಟ್ಟಿಗೆಯೊಳಗೆ ಅಡಗಿಕೊಂಡಿರುವ ಬೆಂಕಿಗೆ ಹೇಗೆ ದಹನ-ಪ್ರಕಾಶನಧರ್ಮಗಳು ಮುಚ್ಚಿಹೋಗಿರುವವೋ ಹಾಗೆಯೇ ದೇಹೇಂದ್ರಿಯಮನೋಬುದ್ಧಿಗಳೆಂಬ ಉಪಾಧಿಗಳಲ್ಲಿ ಬೆರೆತುಹೋಗಿರುವ ಜೀವನಿಗೆ ಜ್ಞಾನೈಶ್ವರ್ಯಗಳು ಮುಚ್ಚಿಹೋಗಿರುತ್ತವೆ. ಕಟ್ಟಿಗೆಯನ್ನು ಭೇದಿಸಿಕೊಂಡು ಬೆಂಕಿಯು ಹೊರಗೆ ಕಾಣಿಸಿಕೊಂಡಾಗಲೇ ದಹನ-ಪ್ರಕಾಶನಗಳು ಸಾಧ್ಯವಾಗುವಂತೆ ಶರೀರಾದ್ಯಭಿಮಾನಗಳಿಂದ ಮೇಲೆದ್ದ ಜೀವನು ಮಾತ್ರವೇ ಪರಬ್ರಹ್ಮಭಾವವನ್ನು ಹೊಂದಿದವನಾಗಿ ಜ್ಞಾನೈಶ್ವರ್ಯಾದಿಧರ್ಮಗಳನ್ನು ಹೊರಗೆಡವುತ್ತಾನೆ. ಹಾಗಿಲ್ಲದೆ ದೇಹಾದಿಗಳೇ ತಾನೆಂಬ ಅವಿವೇಕಭ್ರಮೆಯಿಂದ ಕೂಡಿರುವವರೆಗೂ ಅವನು ಕಿಂಚಿಜ್ಞನೇ ಆಗಿದ್ದು ತಿರೋಹಿತಜ್ಞಾನೈಶ್ವರ್ಯನಾಗಿರುವನು- ಎಂದಭಿಪ್ರಾಯ.

ಹಾಗಾದರೆ ಜೀವನು ಪರಮೇಶ್ವರನಿಗಿಂತ ಬೇರೆಯೇ-ಎಂದೇ ಆಗಲಿ, ಜ್ಞಾನ, ಐಶ್ವರ್ಯಗಳ ತಿರೋಧಾನಕ್ಕೆ ದೇಹಾದ್ಯುಪಾದಿಗಳ ಸಂಬಂಧವೇ ಕಾರಣ- ಎಂಬ ಕಲ್ಪನೆಯನ್ನೇಕೆ ಮಾಡಬೇಕು? ಎಂದರೆ ಹಾಗಲ್ಲ. ಜೀವನು ಪರಮೇಶ್ವರನಿಗಿಂತ ಬೇರೆಯೇ ಎಂದರೆ ಶ್ರುತಿವಿರೋಧವಾಗುವದು. ಮತ್ತು ಹೊಂದುವದೂ ಇಲ್ಲ.

ಹೇಗೆಂದರೆ : 'ಆ ಈ ದೇವತೆಯು ನೋಡಿತು' ಎಂದು ಆರಂಭಿಸಿ 'ಈ ಜೀವಾತ್ಮ ರೂಪದಿಂದ ಶರೀರವನ್ನು ಪ್ರವೇಶಿಸಿತು' ಎಂದು ಶ್ರುತಿಯಲ್ಲಿ ಹೇಳುವಾಗ ಜೀವಾತ್ಮ ನೆಂಬಲ್ಲಿ ಆತ್ಮಶಬ್ದದ ಪರಾಮರ್ಶವಿದೆ. ಮುಂದೆ 'ಅದೇ ಸತ್ಯವು ; ಅದೇ ಆತ್ಮನು ; ಅವನೇ ನೀನಾಗಿರುವೆ' ಎಂದು ಜೀವನಿಗೇ ಈಶ್ವರಾತ್ಮತ್ವವನ್ನು ಉಪದೇಶಮಾಡಿದೆ. ಹೀಗಿರುವದರಿಂದ ಜೀವನನ್ನು ಈಶ್ವರನಿಗಿಂತ ಬೇರೆ-ಎನ್ನಲಾಗುವದಿಲ್ಲ. ಆದ್ದರಿಂದ ಜೀವನೇ ಪರಮೇಶ್ವರನು ಎಂಬ ಸಿದ್ಧಾಂತಾನುಗುಣವಾಗಿಯೇ ಉಳಿದ ವಿಚಾರ ಗಳನ್ನೂ ಹೊಂದಿಸಿಕೊಳ್ಳಬೇಕು. ಹಾಗೆ ಹೊಂದಿಸಲು ಹೊರಟಾಗ ಜ್ಞಾನೈ ಶ್ವರ್ಯಗಳು ಜೀವನಲ್ಲೇಕೆ ಕಂಡುಬರುವದಿಲ್ಲ ? ಎಂಬ ಪ್ರಶ್ನೆ ಹುಟ್ಟಿದೆ. ಅದನ್ನು ಉಪಾಧಿಸಂಬಂಧದಿಂದ ತಿರೋಭಾವವಾಗಿದೆ- ಎಂಬೀರೀತಿಯಿಂದಲೇ ಪರಿಹರಿಸಿ ಕೊಳ್ಳಬೇಕಾದದ್ದು ಅನಿವಾರ್ಯವಾಗಿದೆ. ಇದನ್ನೇ ಸೂತ್ರಕಾರರೂ ಸಮರ್ಥಿ ಸಿರುತ್ತಾರೆ.

ಇನ್ನೊಂದು ವಿಚಾರ : ಜೀವನ ಜ್ಞಾನೈಶ್ವರ್ಯಗಳ ತಿರೋಭಾವವನ್ನು ಹೀಗೂ ಸಮರ್ಥಿಸಬಹುದಾಗಿದೆ. ಜೀವನೆಂದರೇ ದೇಹೇಂದ್ರಿಯಪಂಜರಾಧ್ಯಕ್ಷನು. ಅವನು ಈ ಉಪಾಧಿಗಳನ್ನು ಕಳಚಿಕೊಂಡರೆ ಜೀವನೆನಿಸುವದೇ ಇಲ್ಲ. ಆದ್ದರಿಂದ ಈ ಜೀವಾತ್ಮನಿಗೆ ಸ್ವಾತಂತ್ರ್ಯವು ಮೊಟಕಾಗಿರುವದೇ ಸ್ವಭಾವವಾಗಿದೆ. 'ಗೋಡೆ ಯಿಂದಾಚೆಗೆ ನನಗೆ ಕಾಣಿಸುವದಿಲ್ಲ'- ಎಂದು ಒಬ್ಬನು ಹೇಳಿದರೆ ಅವನನ್ನು ಕುರುಡನೆನ್ನಲಾಗುವದಿಲ್ಲ. ಅಥವಾ ನೋಡುವ ಸ್ವಭಾವವೇ ಇಲ್ಲ- ಎನ್ನಲೂ ಬರುವದಿಲ್ಲ. ಏಕೆಂದರೆ ನೋಡುವ ಸಾಮರ್ಥ್ಯವೇನೋ ಇದೆ. ಗೋಡೆಯೆಂಬ ಅಡ್ಡಿಯನ್ನು ದಾಟಿನೋಡಲು ಬರುವದಿಲ್ಲ- ಎಂಬಿದೂ ನಿಜವಾಗಿದೆ. ಇಲ್ಲಿ ಗೋಡೆ ಯೆಂಬ ಅಡ್ಡಿ, ಕಣ್ಣಿನ ನೋಟದ ಸಾಮರ್ಥ್ಯ-ಇವುಗಳನ್ನವಲಂಬಿಸಿರುವ ಆತ್ಮನಿಗೆ ಪರಿಚ್ಛಿನ್ನದೃಷ್ಟಿಯಿದೆ- ಎಂದರೆ ತಪ್ಪೇನು ? ಹಾಗೆಯೇ ಜೀವನೂ ದ್ರಷ್ಟೃವಾಗಿದ್ದ ರೂ ಸರ್ವಜ್ಞನಲ್ಲ ; ಸರ್ವಜ್ಞನಾಗಬೇಕಾದರೆ ಜೀವತ್ವೋಪಾಧಿಯನ್ನು ಕಳಚಿ ಕೊಳ್ಳಬೇಕು. ಜೀವಾತ್ಮಸ್ಥಿತಿಯಲ್ಲಿ ಅಸರ್ವಜ್ಞನೆನಿಸಿದ ಮಾತ್ರಕ್ಕೆ ಸ್ವರೂಪ ಭೂತವಾದ ಜ್ಞಾನೈಶ್ವರ್ಯಗಳಿಗೇನೂ ಹಾನಿಯಿಲ್ಲ. ಒಬ್ಬ ಸಾಹುಕಾರನ ಜೇಬಿ ನಲ್ಲಿ ಒಂದು ಸಂದರ್ಭದಲ್ಲಿ ಅನಿರೀಕ್ಷಿತವಾಗಿ ಹಣವಿಲ್ಲದೆ ಇರಬಹುದು. ಇದರಿಂದ ಆ ಕಾಲಕ್ಕೆ ಅವನಿಗೆ ಸಂಕೋಚವೂ ಆಗಬಹುದು. ಆದರೆ ಅವನು ಸಾಹುಕಾರನೇ ಅಲ್ಲನೆಂದೂ ದರಿದ್ರನೆಂದೂ ಹೇಳಲಾದೀತೆ ? ಹಾಗೆಯೇ ಜೀವನ ಅಲ್ಪತ್ವವೂ ತಾತ್ಕಾಲಿಕವೂ ಔಪಾಧಿಕವೂ ಆಗಿರುವದು. ಆದ್ದರಿಂದಲೇ ಅವನು ತಾನು ಕಾಣು ತ್ತಿರುವ ಕನಸಿನಲ್ಲಿ ತನಗೆ ಬೇಕಾದದ್ದನ್ನು ಸೃಷ್ಟಿಮಾಡಿಕೊಳ್ಳಲಾರನು. ತಾನೇ ಮಾಡಿಕೊಳ್ಳಬಹುದಾಗಿದ್ದರೆ ಅನರ್ಥಗಳನ್ನೇಕೆ ಸೃಷ್ಟಿಮಾಡಿಕೊಳ್ಳುತ್ತಿದ್ದನು ? ಇದುಕೂಡ ಜೀವಾತ್ಮನ ಅಸ್ವಾತಂತ್ರ್ಯವನ್ನು ತೋರಿಸುತ್ತದೆ. ಆದ್ದರಿಂದ ದೇಹಾ ದ್ಯುಪಾಧಿಗಳ ನಿಮಿತ್ತವಾದ ಜೀವತ್ವವು ಆತ್ಮನಿಗೆ ಆಗಂತುಕವೆಂದೂ ಪರಮಾ ತ್ಮತ್ವವೇ ಸ್ವಾಭಾವಿಕವೆಂದೂ ತಿಳಿಯಬೇಕು.

---

# ಸರಸ್ವತೀಸೂಕ್ತ-೬

( ಅಧ್ಯಾತ್ಮವಿದ್ಯಾಪ್ರವೀಣ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಗಳು )

ಈವರೆಗೆ ಸರಸ್ವತೀಸೂಕ್ತದ ಹದಿನಾಲ್ಕು ಮಂತ್ರಗಳನ್ನು ವಿಚಾರಮಾಡಿದ್ದಾಗಿದೆ. ಈಗ ಋಗ್ವೇದ ಐದನೆಯ ಅಷ್ಟಕದಲ್ಲಿರುವ ಇನ್ನೂ ಹನ್ನೆರಡು ಸರಸ್ವತೀದೇವತಾಕವಾದ ಋಕ್ಕುಗಳನ್ನು ವಿಚಾರಮಾಡೋಣ. ಇವುಗಳಲ್ಲಿ ಮೊದಲಿನದು ಹೀಗಿದೆ :—

**ಓಂ ॥ ಪ್ರ ಕ್ಷೋದಸಾ ಧಾಯಸಾ ಸಸ್ರ ಏಷಾ ಸರಸ್ವತೀ ಧರುಣ-**
**ಮಾಯಸೀ ಪೂಃ । ಪ್ರಬಾಬಧಾನಾ ರಥ್ಯೇವ ಯಾತಿ**
**ವಿಶ್ವಾ ಅಪೋ ಮಹಿನಾ ಸಿಂಧುರನ್ಯಾಃ ॥**

ಈ ಮಂತ್ರದಲ್ಲಿಯೂ ನದೀರೂಪಳಾದ ಸರಸ್ವತಿಯನ್ನು ಸ್ತುತಿಸಿದೆ. ಈ ಸರಸ್ವತೀನದಿಯು ಕಬ್ಬಿಣದ ಕೋಟೆಯುಳ್ಳ ಪಟ್ಟಣದಂತೆ ಸುಭದ್ರವಾಗಿದ್ದು ಪ್ರಾಣಿಗಳನ್ನೆಲ್ಲ ತನ್ನ ಜಲಧಾರೆಯಿಂದ ತೃಪ್ತಿಗೊಳಿಸುತ್ತಾ ಕಾಪಾಡುತ್ತಾ ಮುಂದು ಮುಂದಕ್ಕೆ ಶೀಘ್ರವಾಗಿ ಹರಿಯುತ್ತಲೂ ಇರುವಳು. ಹರಿದುಹೋಗುವ ಸ್ವಭಾವದವಳಾದ ಈಕೆಯು ತನ್ನ ನೀರಿನ ಮಹಿಮೆಯಿಂದ- ಹೇಗೆ ರಥಾರೂಢನಾದವನು ತನ್ನ ರಥದಲ್ಲಿ ಸಂಚರಿಸುವಾಗ ಮಾರ್ಗದಲ್ಲಿ ಅಡ್ಡಲಾಗುವ ಗಿಡಗೆಂಟೆಗಳನ್ನು ಪುಡಿ ಮಾಡುತ್ತಾ ಮುಂದುವರೆಯುವನೋ- ಹಾಗೆ ಬೇರೆಬೇರೆಯ ನೀರಿನ ಸೀಳುಗಳನ್ನೆಲ್ಲ ತನ್ನಲ್ಲಿ ಅಡಕಮಾಡಿಕೊಳ್ಳುತ್ತಾ ಪಾತ್ರವನ್ನು ಅಗಲವಾಗಿ ಮಾಡಿಕೊಂಡು ಹೋಗುತ್ತಿರುವಳು- ಎಂದಭಿಪ್ರಾಯ. ನದಿಗೆ ಪ್ರವಾಹವೇ ಭೂಷಣವು. ಅದು ಹುಟ್ಟುವಾಗ ಅತಿ ಕಿರಿದಾದ ಪಾತ್ರವುಳ್ಳದ್ದಾಗಿದ್ದು ಸಮುದ್ರವನ್ನು ಸೇರುವ ವೇಳೆಗೆ ಉಪನದಿಗಳ ಸಂಗಮದಿಂದಲೂ ತನ್ನ ಸ್ವಂತ ಜಲಧಾರೆಯಿಂದಲೂ ಬಹಳ ದೊಡ್ಡದಾಗುವದು. ನದಿಯು ಹೆಚ್ಚು ನೀರನ್ನು ಹೊತ್ತು ಬಂದಂತೆಲ್ಲ ಹೆಚ್ಚು ಜನರಿಗೂ ಪ್ರಾಣಿಗಳಿಗೂ ಜೀವನಾಧಾರವಾಗುವದು. ಈಗಿನ ಕಾಲದಲ್ಲಂತೂ ಒಂದೇ ನದಿಗೆ ಬೇರೆಬೇರೆಯ ಆಯ್ದ ಜಾಗಗಳಲ್ಲಿ ಹತ್ತಾರು ಅಣೆಕಟ್ಟೆಗಳನ್ನು ನಿರ್ಮಿಸಿ ವ್ಯವಸಾಯಭೂಮಿಯನ್ನೆಲ್ಲ ನೀರಿನಿಂದ ತೋಯಿಸುತ್ತಾರೆ. ಸಮೃದ್ಧವಾದ ಬೆಳೆಯನ್ನೂ ತೆಗೆಯುತ್ತಾರೆ. ರೈತವರ್ಗದವರಿಗೆಲ್ಲ ನದಿಯು ಮಾತೃಸ್ವರೂಪಳೇ ಆಗಿದ್ದು ಪೋಷಣೆಯನ್ನು ನೀಡುತ್ತಾಳೆ. ಇಂಥ ತಾಯಂದಿರಲ್ಲಿ ಸರಸ್ವತಿಯು ಗಣ್ಯಳಾಗಿರುತ್ತಾಳೆ. ಆದರೆ ಈಕೆಯ ವೇಗವು ಬಹು ಶೀಘ್ರವಾದದ್ದು. ಆದ್ದರಿಂದಲೇ ತನಗೆ ಅಡ್ಡಲಾಗುವ ಭೂಮಿಯಮೇಲಿರುವ ಎಲ್ಲಾ ಅಡೆತಡೆಗಳನ್ನೂ ಕೊಚ್ಚಿಕೊಂಡು ಮುನ್ನುಗ್ಗಿಬಿಡುವಳು-ಎಂದು ರಥಿಕನ ದೃಷ್ಟಾಂತದಿಂದ ವಿವರಿಸಲಾಗಿದೆ. ಈಕೆಯ ಮಹಿಮೆಯು ದೇವತಾರೂಪದಿಂದ ಕಂಡುಕೊಂಡಾಗ ಇನ್ನೂ ಆಶ್ಚರ್ಯವನ್ನುಂಟುಮಾಡಲಿದೆ. ವೇದಗಳಿಂದ ಸ್ತುತಿಸಲ್ಪಡುವ ನದಿಗಳಲ್ಲಿ

ಸರಸ್ವತಿಯದು ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿದೆ. ಇಂಥ ನದೀದೇವಿಯಾದ ಸರಸ್ವತಿಯು ಯಾವಾಗಲೂ ನಮ್ಮನ್ನು ರಕ್ಷಿಸಲಿ– ಎಂದಭಿಪ್ರಾಯ.

ಈಗ ಮುಂದಿನ ಮಂತ್ರವನ್ನು ವಿಚಾರಮಾಡೋಣ.

**ಓಂ ॥ ಏಕಾಚೇತತ್ಸರಸ್ವತೀ ನದೀನಾಂ ಶುಚಿರ್ಯತೀ ಗಿರಿಭ್ಯ**
**ಆ ಸಮುದ್ರಾತ್ । ರಾಯಶ್ಚೇತಂತೀ ಭುವನಸ್ಯ ಭೂರೇ-**
**ರ್ಘೃತಂ ಪಯೋ ದುದುಹೇ ನಾಹುಷಾಯ ॥**

"ನದಿಗಳಲ್ಲೆಲ್ಲ ಪರಿಶುದ್ಧವಾದ ಹಾಗೂ ಹುಟ್ಟುವ ಸ್ಥಳವಾದ ಬೆಟ್ಟಗಳಿಂದಾರಂಭಿಸಿ ಸಮುದ್ರದವರೆಗೂ ಹರಿಯುವ ಜೀವನದಿಯಾದ ಸರಸ್ವತೀನದಿಯು ಅಚೇತತ್– ಅರಿತುಕೊಂಡಳು. ಮತ್ತು ಪ್ರಪಂಚದ ಜನರ ಧನಧಾನ್ಯಗಳನ್ನು ದಯಪಾಲಿಸುವವಳಾದ ಆಕೆಯು ನಾಹುಷನೆಂಬ ರಾಜನಿಗೆ ತುಪ್ಪ–ಹಾಲುಗಳನ್ನು ಕೊಡುವವಳಾದಳು" ಎಂದರ್ಥ.

ಒಮ್ಮೆ ನಾಹುಷನೆಂಬ ರಾಜನು ಒಂದು ಸಾವಿರವರ್ಷಗಳ ಕಾಲ ನಡೆಯಿಸುವಂಥ ಒಂದು ಯಜ್ಞವನ್ನು ಮಾಡಲಿಚ್ಛಿಸಿದನು. ಆಗ ಅವನು ಯಜ್ಞದ ನಿರ್ವಹಣೆಗಾಗಿ ಸಮೃದ್ಧವಾದ ಹಾಲು–ತುಪ್ಪಗಳನ್ನು ನಿರಂತರವಾಗಿ ಒದಗಿಸುವಂತೆ ಈ ನದೀದೇವಿಯಾದ ಸರಸ್ವತಿಯನ್ನೇ ಪ್ರಾರ್ಥಿಸಿಕೊಂಡನು. ಈಕೆಯು ರಾಜನ ಪ್ರಾರ್ಥನೆಯನ್ನು ಮನ್ನಿಸಿದವಳಾಗಿ ಸಾವಿರವರ್ಷಗಳ ಕಾಲವೂ ಹಾಲು–ತುಪ್ಪಗಳನ್ನು ಕರುಣಿಸಿದಳು-ಎಂದು ಋಷಿಯು ಈ ಮಂತ್ರದಲ್ಲಿ ಸ್ತುತಿಸಿರುತ್ತಾನೆ. ಈಗಿನ ಕಾಲದ ಜನರಿಗೆ ಇಪ್ಪತ್ತುನಾಲ್ಕು ಘಂಟೆಗಳ ಪೂರ್ಣಾವಧಿಯ ಒಂದು ಅನುಷ್ಠಾನವನ್ನು ಕೂಡ ಮಾಡುವದು ಅಸಾಧ್ಯವೆನಿಸಿರುವದು. ಹೀಗಿರುವಲ್ಲಿ ಸಹಸ್ರಸಂವತ್ಸರಗಳ ಯಜ್ಞದ ವಿಚಾರವು ಹಾಸ್ಯಾಸ್ಪದವೇ ಆಗಿ ಕಾಣಬಹುದು. ಆದರೆ ಕೃತಯುಗದ ಜನರ ಶಕ್ತಿಭಕ್ತಿಗಳನ್ನು ನಮ್ಮ ಸಂಕುಚಿತದೃಷ್ಟಿಯಿಂದ ಅಳೆಯಬಾರದು. ಕಲಿಯುಗದ ಜನರು ಒಂದು ಪಾವು ಅಕ್ಕಿಯ ಅನ್ನವನ್ನು ಊಟಮಾಡುವದೇ ದುಸ್ತರವೆಂಬ ಕಾರಣದಿಂದ ಭೀಮನು ಒಂದು ಬಂಡಿಯ ಅನ್ನವನ್ನು ತಿಂದನು– ಎಂಬ ಕಥೆಯನ್ನು ಕಟ್ಟುಕಥೆ– ಎನ್ನಲಾದೀತೆ ? ಹಾಗೆಯೇ ಇದನ್ನು ತಿಳಿಯಬೇಕು. ಪುರಾಣಗಳಲ್ಲಿಯೂ ಸಹಸ್ರಸಂವತ್ಸರಪರ್ಯಂತವಾದ ಯಜ್ಞಗಳನ್ನು ಋಷಿಗಳು ಕೈಗೊಂಡಿದ್ದರೆಂಬ ಪ್ರಸ್ತಾಪವಿದೆ. ಅಂತೂ ಬಹುದೀರ್ಘಕಾಲದ ಒಂದು ಮಹಾಯಜ್ಞವನ್ನು ನಾಹುಷರಾಜನು ಕೈಗೊಂಡಾಗ ದೇವತಾನುಗ್ರಹವಿಲ್ಲದೆ ಅದಕ್ಕೆ ದ್ರವ್ಯಗಳನ್ನು ಹೊಂದಿಸುವದು ಸಾಧ್ಯವಿಲ್ಲ. ನದೀಪ್ರಮಾಣದ ಆಜ್ಯ, ಕ್ಷೀರಾದಿದ್ರವ್ಯಗಳೇ ಅದಕ್ಕೆ ಬೇಕಾಗುವವು. ಆದ್ದರಿಂದ ಆ ರಾಜನು ಸರಸ್ವತಿಯನ್ನೇ ಸಾವಿರವರ್ಷಗಳ ಕಾಲ ಹಾಲು – ತುಪ್ಪಗಳಾಗಿ ಹರಿಯುವಂತೆ ಕೇಳಿಕೊಂಡನು. ದೇವಿಯೂ ಆ ಕರ್ತೃವಿನ ಸತ್ಸಂಕಲ್ಪಕ್ಕೆ ಸಂತುಷ್ಟಳಾಗಿ ತಾನೇ ಹಾಲಿನ ರೂಪದಿಂದ ಸಾವಿರವರ್ಷಗಳು ಪ್ರವಹಿಸಿದಳು.

ಇಂಥ ಮಹಿಮಾಯುಕ್ತಳಾದ ಸರಸ್ವತೀನದೀದೇವಿಯನ್ನು ಕುರಿತು ಇಲ್ಲಿ ಭಕ್ತಿಪೂರ್ವಕವಾಗಿ ಸ್ತುತಿಸಲಾಗಿದೆ.

**ಓಂ ॥ ಸವಾವೃಧೇ ನರ್ಯೋ ಯೋಷಣಾಸು ವೃಷಾ ಶಿಶು-**
**ರ್ವೃಷಭೋ ಯಜ್ಞಿಯಾಸು । ಸವಾಜಿನಂ ಮಘವದ್ಭ್ಯೋ**
**ದಧಾತಿ ವಿ ಸಾತಯೇ ತನ್ವಂ ಮಾಮೃಜೀತ ॥**

ಈ ಮಂತ್ರವು ಸರಸ್ವತೀದೇವಿಯನ್ನು ಕುರಿತು ಮಾಡುವ ಯಜ್ಞದಲ್ಲಿ ಆಕೆಯ ಪ್ರೀತ್ಯರ್ಥವಾಗಿ ಅರ್ಪಿಸುವ ಪಶುವನ್ನು ಕುರಿತು ಸ್ತೋತ್ರಮಾಡತಕ್ಕದ್ದಾಗಿದೆ. ದೇವತೆಗಳಿಗಾಗಿ ಮಾಡುವ ಯಜ್ಞಗಳಲ್ಲಿ ಪಶುವಿನ ಅರ್ಪಣೆಯು ಇರುತ್ತದೆ. ಇಂಥಿಂಥ ದೇವತೆಗಳಿಗೆ ಇಂಥಿಂಥ ಪಶುಗಳನ್ನು ಸಮರ್ಪಿಸಬೇಕೆಂಬ ವಿಧಿಯೂ ಇದೆ. ಸಾರಸ್ವತಯಜ್ಞಕ್ಕೂ ಇದು ಅನ್ವಯಿಸುತ್ತದೆ. ಪಶುವು ಹುಟ್ಟುವ ಕಾಲಕ್ಕೆ ಶಿಶುರೂಪವಾಗಿ ಕರುವಾಗಿದ್ದರೂ ಕಾಲಕ್ರಮೇಣ ಬೆಳೆದು ದೊಡ್ಡದಾಗುವದು. ಪ್ರಾಯದಲ್ಲಿ ಅದು ರೇತಃಸೇಚನಸಮರ್ಥವಾಗುವದು. ಹಾಗೆಯೇ ಈ ಸಾರಸ್ವತಪಶುವೂ ಈಗ ಅಲ್ಪವಾಗಿ ಕಂಡರೂ ಮುಂದೆ ಅದು ಸೇಚನಸಮರ್ಥವಾದ ಪಶುವಾಗಲಿದೆಯಾದ್ದರಿಂದ ಅದು ನರ್ಯವು- ಎಂದರೆ ಹಿತವನ್ನುಂಟುಮಾಡತಕ್ಕದ್ದಾಗಿದೆ. ಮತ್ತು ಅದು ಗರ್ಭದಲ್ಲಿ ಬೆಳೆಯುವಾಗ ಹೆಚ್ಚಾಗಿ ಜಲರೂಪದಿಂದ ಇದ್ದುಕೊಂಡಿದ್ದು ಅನಂತರ ಪಾರ್ಥಿವಶರೀರವನ್ನು ಹೊತ್ತು ಜನಿಸುವದು. ಇಂಥ ಯಜ್ಞಪಶುವು ಏನನ್ನು ಸೂಚಿಸುತ್ತದೆಯೆಂದರೆ ಮಘವದ್ಭ್ಯಃ-ಎಂದರೆ ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ, ಯಜ್ಞದ ಫಲವಾಗಿ ಆತನ ಪತ್ನಿಯು ದೃಢವಾದ ಹಾಗೂ ಪವಿತ್ರವಾದ ಗರ್ಭವನ್ನು ಧರಿಸಿ ಯೋಗ್ಯನಾದ ಪುತ್ರನನ್ನು ಹಡೆಯುತ್ತಾಳೆಂಬುದನ್ನು ದೃಢಪಡಿಸುತ್ತದೆ. ಅದಕ್ಕಾಗಿಯೇ ಯಜಮಾನನು ಈ ಯಜ್ಞಪಶುವಿನ ಶರೀರವನ್ನು ವಿಮಾಮೃಜೀತ-ಪುತ್ರಾದಿಲಾಭಕ್ಕಾಗಿ ಸಂಸ್ಕಾರಮಾಡಬೇಕು- ಎಂದರ್ಥ. ಯಾವದೇ ದ್ರವ್ಯವನ್ನು ದೇವತಾರ್ಪಣೆಮಾಡುವಾಗ ಸಂಸ್ಕಾರಮಾಡಿಯೇ ಸಮರ್ಪಿಸಬೇಕು. ಇನ್ನು ಯಜ್ಞಕಾಲದಲ್ಲಂತೂ ವಿಧಿಬದ್ಧವಾದ ಸಂಸ್ಕಾರಗಳೇ ಯಜ್ಞೀಯಪಶುವಿಗೂ ಆಗಬೇಕು. ಯಜಮಾನನು ಈ ಸಂಸ್ಕಾರಕರ್ತನಾಗಿರುವನು- ಎಂದಭಿಪ್ರಾಯ. ಇದರಲ್ಲಿ ಪತ್ನಿಯ ಕರ್ತವ್ಯವೂ ಇರುತ್ತದೆ. ಹೀಗೆ ಸುಸಂಸ್ಕೃತವಾದ ಪಶುವು ವಿಧಿಪೂರ್ವಕವಾಗಿ ದೇವತೆಗೆ ಅರ್ಪಿಸಲ್ಪಟ್ಟರೆ ಯಜ್ಞವು ಸಾಂಗವಾಗಿ ನೆರವೇರಿ ಯಜಮಾನನು ಪುತ್ರಾದಿ ಐಹಿಕಫಲಗಳನ್ನು ಹೊಂದುವನು- ಎಂದು ಇಲ್ಲಿ ಸ್ತುತಿಸಿದೆ. ಒಂದು ರೀತಿಯಿಂದ ಈ ಮಂತ್ರವು ಸಾರಸ್ವತಪಶುವಿನ ಸಂಬಂಧವಾದ ತಾತ್ಪರ್ಯವುಳ್ಳದ್ದಾದರೂ ಸರಸ್ವತೀಪ್ರೀತಿಗಾಗಿಯೇ ಮಾಡುವ ಯಜ್ಞದಲ್ಲಿ ಈ ಸ್ತುತಿಯೂ ಒಳಪಡುವದರಿಂದ ಸೂಕ್ತದಲ್ಲಿ ಸೇರಿದೆ- ಎಂದು ಭಾಷ್ಯಕಾರರು ತಿಳಿಸಿರುತ್ತಾರೆ.

# ಉಪಸ್ಥಾನ, ವಂದನ-೩

(ಅಧ್ಯಾತ್ಮವಿದ್ಯಾಪ್ರವೀಣ ಶ್ರೀ ಕೆ.ಜಿ. ಸುಬ್ರಾಯಶರ್ಮರು, ಬೆಂಗಳೂರು)

ಹಿಂದಿನ ಲೇಖನದಲ್ಲಿ ವಿವರಿಸಿದ್ದ ಉಪಸ್ಥಾನಮಂತ್ರದ ಮುಂದಿನ ಭಾಗವನ್ನು ಈಗ ವಿಚಾರಮಾಡೋಣ. ಅದು ಹೀಗಿದೆ :—

**ಓಂ ॥ ಕಿತವಾಸೋ ಯದ್ರಿರಿಪುರ್ನ ದೀವಿ ಯದ್ವಾ ಘಾ ಸತ್ಯಮುತ ಯನ್ನ ವಿದ್ಮ । ಸರ್ವಾ ತಾ ವಿಷ್ಯ ಶಿಥಿರೇವ ದೇವಾಥಾತೇ ಸ್ಯಾಮ ವರುಣ ಪ್ರಿಯಾಸಃ ॥**

ಎಲೈ ವರುಣನೆ, ಕಿತವಾಸಃ- ಧೂರ್ತಸಮಾನರಾದ ಎಂದರೆ ಸ್ವಾರ್ಥಸಾಧಕರಾದ ಋತ್ವಿಜರು ಯತ್- ಯಾವ ಕರ್ಮವನ್ನು ಅಥವಾ ಕರ್ಮಾಂಗವನ್ನು ರಿರಿಪುಃ - ನಾಶಗೊಳಿಸಿದರೋ ಎಂದರ್ಥ. ಋತ್ವಿಜರು ಪ್ರಮಾದದಿಂದಲೋ ದಕ್ಷಿಣೆಯ ಆಶೆಗೊಳಗಾಗಿಯೋ ಕೆಲವು ವೇಳೆ ಕರ್ಮವಿಘಾತವನ್ನು ಮಾಡುವದೂ ಉಂಟು. ಯಜಮಾನನು ಋತ್ವಿಜರ ಕಷ್ಟವನ್ನೂ ಶ್ರಮವನ್ನೂ ಅರಿತು ದಕ್ಷಿಣೆಯನ್ನು ಸರಿಯಾಗಿ ಕೊಡಬೇಕು. ಇಲ್ಲವಾದರೆ ಔದಾಸೀನ್ಯದಿಂದ ಕರ್ಮವನ್ನು ಮಾಡಿ ಋತ್ವಿಜರು ಅದನ್ನು ಕೆಡಿಸಿಬಿಡುವರು. ಹೀಗೆ ಬೇರೆಬೇರೆಯ ನಿಮಿತ್ತಗಳಿಂದ ಕರ್ಮಭಂಗವಾದಾಗ ನ ದೀವಿ-ಸರಿಯಾಗಿ ಅವರುಗಳು ನಿರ್ವಹಿಸಲಿಲ್ಲವೋ, ಆ ಪಾಪವು ಸತ್ಯಂ- ಅವಶ್ಯವಾಗಿಯೂ ನಡೆದಿದ್ದರೂ, ಯಜಮಾನರಾದ ನಾವು ನ ವಿದ್ಮ- ತಿಳಿದಿರುವದಿಲ್ಲವೋ ಸರ್ವಾ ತಾ- ಆ ಎಲ್ಲ ಅಪರಾಧಗಳನ್ನೂ ವಿಷ್ಯ- ನಾಶಗೊಳಿಸುವವನಾಗು. ಹೀಗೆ ಮಹಾಪಾಪಗಳನ್ನೆಲ್ಲ ನಾಶಗೊಳಿಸಿದ ಅನಂತರ ಕ್ಷುದ್ರಪಾಪಗಳನ್ನೂ ಕಳೆಯುವವನಾಗು ಎಂದು ಪ್ರಾರ್ಥಿಸಲಾಗುವದು. ಹೇಗೆಂದರೆ ಶಿಥಿರೇವ- ಶಿಥಿಲವಾಗಿ ಮಾಡು- ಎಂದರ್ಥ. ಈ ರೀತಿಯಲ್ಲಿ ಸಮಸ್ತ ಪಾಪಗಳೂ ಕಳೆಯಲ್ಪಟ್ಟಾಗ ಎಲೈ ವರುಣನೆ, ತೇ ಪ್ರಿಯಾಸಃ ಸ್ಯಾಮ- ನಿನಗೆ, ನಾವು ಪ್ರೀತಿಪಾತ್ರರಾಗುವೆವು- ಎಂದಭಿಪ್ರಾಯ.

ದೇವತೆಗಳಿಗೆ ನಾವು ಪ್ರಿಯರಾಗಬೇಕಾದರೆ ಅವರ ಆಜ್ಞೆಗಳನ್ನು ಮೀರದೆ ನಿರ್ವಹಿಸಬೇಕು. ಕರ್ಮಗಳನ್ನು ಕೈಗೊಳ್ಳುವಾಗಲೂ ನಮ್ಮ ಶಕ್ತಿಭಕ್ತಿಗಳಿಗೆ ಅನುಸಾರವಾಗಿ ಸರಿಯಾದ ಋತ್ವಿಜರ ಸಹಾಯದಿಂದ ಶ್ರದ್ಧೆಯಿಂದ ಮಾಡಬೇಕು. ಎಷ್ಟೇ ಎಚ್ಚರಿಕೆಯಿಂದ ಮಾಡಿದರೂ ಏನಾದರೂ ಲೋಪದೋಷಗಳು ಕರ್ಮಕಾಲಕ್ಕೆ ಸಂಭವಿಸುವದು ಸ್ವಾಭಾವಿಕ. ಇಂಥವುಗಳಿಗೆ ಆ ಕೂಡಲೆ ಪ್ರಾಯಶ್ಚಿತ್ತಗಳೆಂಬ ಪರಿಹಾರಕರ್ಮಗಳನ್ನೂ ತಿಳಿಸಿರುತ್ತದೆ. ಆದರೂ ದೇವತಾಸ್ತುತಿಯಿಂದಲೂ ಶರಣಾಗತಿಯಿಂದಲೂ ಕರ್ಮಛಿದ್ರಗಳು ಪರಿಹೋಗುವಂತೆ ಉಳಿದ ಉಪಾಯಗಳಿಂದ ಪರಿಹಾರವಾಗುವದಿಲ್ಲ. ಅದ್ದರಿಂದ ನಿತ್ಯಕರ್ಮವಾದ ಸಂಧ್ಯಾವಂದನೆಯಲ್ಲಿ ಪ್ರತಿದಿನವೂ ದೇವತಾಸ್ತುತಿಯನ್ನು ಮಾಡಿ ಪಾಪಪರಿಹಾರವನ್ನೂ ಕರ್ಮಲೋಪ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕೆಂದು ಇದರಿಂದ ತಿಳಿದುಬರುತ್ತದೆ.

ಈಗ ದಿಗ್ವಂದನಮಂತ್ರವನ್ನು ವಿಚಾರಮಾಡೋಣ. ಇದನ್ನು ಹೆಚ್ಚಾಗಿ ಯಜುರ್ವೇದಿಗಳು ಪಠಿಸುತ್ತಾರೆ. ಈ ಮಂತ್ರವು ತೈತ್ತಿರೀಯ-ಯಜುರಾರಣ್ಯಕದ ಎರಡನೆಯ ಪ್ರಶ್ನದ ಕಡೆಯ ಅನುವಾಕವಾಗಿದೆ. ಇದು ಹೀಗಿದೆ :

**ಓಂ ॥ ನಮಃ ಪ್ರಾಚ್ಯೈ ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮೋ ದಕ್ಷಿಣಾಯೈ.... ನಮಃ ಪ್ರತೀಚ್ಯೈ.... ನಮ ಉದೀಚ್ಯೈ.... ನಮ ಊರ್ಧ್ವಾಯೈ.... ನಮೋಽಧರಾಯೈ .... ನಮೋಽವಾಂತರಾಯೈ.... ನಮಃ ॥**

ಈ ಮಂತ್ರವು ಬಹಳ ದೀರ್ಘವಾಗಿರುವದರಿಂದ ಎರಡು ಭಾಗಗಳಾಗಿ ಮಾಡಿಕೊಳ್ಳಲಾಗಿದೆ. ಮತ್ತು ಪ್ರತಿಪರ್ಯಾಯದಲ್ಲಿಯೂ **'ದಿಶೇ ಯಾಶ್ಚ ದೇವತಾ ಏತಸ್ಯಾಂ ಪ್ರತಿವಸಂತ್ಯೇತಾಭ್ಯಶ್ಚ ನಮಃ'** ಎಂಬಿದನ್ನು ಸೇರಿಸಿಕೊಳ್ಳಬೇಕೆಂದು ಚುಕ್ಕೆಗಳಿಂದ ಸೂಚಿಸಲಾಗಿದೆ. ಇದನ್ನು ಪಠಿಸುವಾಗ ಆಯಾ ದಿಕ್ಕುಗಳಿಗೆ ತಿರುಗಿಕೊಂಡು ಹೇಳುವ ಪದ್ಧತಿಯಿದೆ. ಮಂತ್ರಾರ್ಥವೇನೆಂದರೆ : ಪೂರ್ವದಿಕ್ಕಿಗೆ ನಮಸ್ಕಾರ; ಮತ್ತು ಈ ದಿಕ್ಕನ್ನು ಆಶ್ರಯಿಸಿ ಯಾವಯಾವ ದೇವತೆಗಳಿರುವರೋ ಅವರೆಲ್ಲರಿಗೂ ವಂದನೆಗಳು- ಎಂದರ್ಥ. ಇದೇ ರೀತಿಯಾಗಿ ಮೇಲೆ, ಕೆಳಗೆ-ಎಂಬ ಎರಡು ದಿಕ್ಕುಗಳೂ ಸೇರಿ ಹತ್ತು ದಿಕ್ಕುಗಳಲ್ಲಿಯೂ ನೆಲಸಿರುವ ಸಮಸ್ತ ದೇವತೆಗಳಿಗೂ ನಮಸ್ಕಾರಗಳು- ಎಂದು ಇಲ್ಲಿ ಸೂಚಿಸಲಾಗಿರುತ್ತದೆ. ಮಾನವನಿಗೆ ದಿಗ್ದೇವತೆಗಳ ಪರಿಚಯವಿರುವದು ಒಳ್ಳೆಯದು. ಭೌಗೋಳಿಕವಾಗಿ ನೋಡಿದರೂ ದಿಕ್ಕುಗಳ ಜ್ಞಾನವಿಲ್ಲವಾದರೆ ವ್ಯವಹಾರವು ಸಾಗುವಂತಿಲ್ಲ. ದಿಕ್ಕನ್ನು ಸೂರ್ಯನು ಉದಯಿಸುವ ಸ್ಥಳದಿಂದಲೇ ಗುರುತಿಸುವದು ಪ್ರಸಿದ್ಧವು. ಆದರಂತೆ ಉದಯವಾಗುವ ದಿಕ್ಕು ಪೂರ್ವವೆನಿಸುವದು. ಅಸ್ತವಾಗುವ ದಿಕ್ಕು ಪಶ್ಚಿಮವೆನಿಸುವದು. ಪೂರ್ವಕ್ಕೆ ಇದಿರಾಗಿ ನಿಂತಾಗ ಬಲಭಾಗವು ದಕ್ಷಿಣವೆಂದೂ ಎಡಭಾಗವು ಉತ್ತರವೆಂದೂ ಕರೆಯಿಸಿಕೊಳ್ಳುವವು. ಇನ್ನು ಅವಾಂತರದಿಕ್ಕುಗಳೆಂದರೆ ಮೂಲೆಗಳು. ಇವು ಕ್ರಮವಾಗಿ ಆಗ್ನೇಯ, ನೈರ್ಋತ್ಯ, ವಾಯವ್ಯ, ಈಶಾನ್ಯ- ಎಂದು ಹೆಸರಿಸಲ್ಪಡುವವು. ಇವುಗಳ ಹೆಸರಿನಲ್ಲೇ ಆಯಾ ದಿಗ್ದೇವತೆಗಳೂ ಸೂಚಿತರಾಗಿರುವರು. ಹೇಗೆಂದರೆ ಆಗ್ನೇಯಕ್ಕೆ ಅಗ್ನಿಯು ಒಡೆಯನು. ಹಾಗೆಯೇ ನಿರ್ಋತಿ, ವಾಯು, ಈಶಾನ- ಎಂಬಿವರು ಆಯಾ ಹೆಸರಿನ ದಿಕ್ಕುಗಳಿಗೆ ಒಡೆಯರು. ಇನ್ನು ಪೂರ್ವಕ್ಕೆ ಇಂದ್ರನೂ ದಕ್ಷಿಣಕ್ಕೆ ಯಮನೂ ಪಶ್ಚಿಮಕ್ಕೆ ವರುಣನೂ ಉತ್ತರಕ್ಕೆ ಕುಬೇರನೂ ಒಡೆಯರು. ಈ ಎಂಟು ಜನರಿಗೂ ದಿಕ್ಪಾಲಕರೆಂದೇ ಹೆಸರು. ಹಾಗೆಯೇ ಊರ್ಧ್ವ (ಮೇಲು) ದಿಕ್ಕಿಗೆ ಆಕಾಶವೂ ಕೆಳಗಡೆಗೆ ಪೃಥಿವಿಯೂ ದೇವತೆಗಳು. ಇವರೂ ಸೇರಿದರೆ ದಿಗ್ದೇವತೆಗಳು ಹತ್ತು ಜನರಾಗುವರು. ಈ ಹತ್ತು ಜನರು ಅಧಿಪತಿಗಳು. ಅವರೊಡನೆ ಇನ್ನೂ ಕೆಲವು ದೇವತೆಗಳು ಆಯಾ ದಿಕ್ಕುಗಳನ್ನು ಆಶ್ರಯಿಸಿಕೊಂಡಿರುವರು. ಉದಾಹರಣೆಗೆ ಪೂರ್ವದಿಕ್ಕಿನಲ್ಲಿ ಇಂದ್ರನಂತೆಯೇ

ಶುಕ್ರನೆಂಬ ದೇವತೆಯೂ ಇದ್ದುಕೊಂಡಿರುವನು. ಹೀಗೆಯೇ ಆಯಾ ದಿಕ್ಕುಗಳ ನ್ನಾಶ್ರಯಿಸಿರುವ ಮುಖ್ಯರಾದ ದೇವತೆಗಳ ಪರಿಚಯವನ್ನೆಲ್ಲ ನಾವು ವೇದ-ಪುರಾಣಾದಿಗಳ ಸಹಾಯದಿಂದ ಅರಿತುಕೊಳ್ಳಬೇಕು. ಇದರಿಂದ ದೇವತಾರಾಧನೆಗೆ ಅನುಕೂಲವಾಗುವದು. ಇನ್ನು ದೇವತೆಗಳಲ್ಲಿಯೇ ಕ್ರೂರ, ಸೌಮ್ಯ-ಸ್ವಭಾವದವರುಂಟು. ಉದಾಹರಣೆಗೆ ಯಮನು ಕ್ರೂರದೇವತೆ. ಆದ್ದರಿಂದ ಶುಭಕಾರ್ಯಗಳನ್ನು ದಕ್ಷಿಣದಿಕ್ಕಿಗೆ ತಿರುಗಿಕೊಂಡು ಮಾಡಬಾರದೆಂದು ಬಲ್ಲವರು ಹೇಳುತ್ತಾರೆ. ಪ್ರತಿಯೊಂದು ವೈದಿಕಕರ್ಮಕ್ಕೂ ದಿಕ್ಕುಗಳ ನಿಯಮವಿದೆ. ಇಂಥ ಕರ್ಮವನ್ನು ಇಂಥ ದಿಕ್ಕಿನಲ್ಲೇ ಮಾಡಬೇಕೆಂಬ ಕಟ್ಟುಪಾಡುಗಳಿವೆ. ಕೆಲವು ವೇಳೆ ಈ ಕಟ್ಟುಪಾಡುಗಳನ್ನು ಲೌಕಿಕಕರ್ಮಗಳಿಗೂ ಅನ್ವಯಿಸಿ ಹೇಳುತ್ತಾರೆ. ಇವುಗಳಲ್ಲೆಲ್ಲ ಅರ್ಥವಿದೆ. ಆದರೆ ಯಾವನಿಗೆ ಭಾವನೆಯಿಲ್ಲವೋ ಅಂಥವನಿಗೆ ದೇವತೆಗಳ ವಿಷಯಕ್ಕಾಗಲಿ ವಿಧಿಪ್ರತಿಷೇಧಗಳ ವಿಚಾರಕ್ಕಾಗಲಿ ಶಾಸ್ತ್ರವನ್ನು ಹೇಳಿದರೆ ಏನೂ ಪ್ರಯೋಜನವಿಲ್ಲ. ಈಗಿನ ನವನಾಗರಿಕತೆಯ ಹೆಸರಿನ ಸ್ವೇಚ್ಛಾಚಾರದಲ್ಲಿ ಹಿಂದಿನ ನೀತಿನಿಯಮಗಳೆಲ್ಲ ತೂರಿಹೋಗಿಯೇಬಿಟ್ಟಿವೆ. ಅದಕ್ಕೆ ತಕ್ಕಂತೆಯೇ ಜನರು ರೋಗರುಜಿನಾದಿಗಳನ್ನೂ ಕಷ್ಟಕಾರ್ಪಣ್ಯಗಳನ್ನೂ ಅನುಭವಿಸುತ್ತಲೇ ಇದಾರೆ. ಆದರೂ ನಿಜವನ್ನು ಒಲ್ಲರು. ಇದೊಂದು ಆಶ್ಚರ್ಯವೇ ಸರಿ. ಇರಲಿ. ಪ್ರಕೃತ ದೇವತೆಗಳು ಎಲ್ಲಾ ದಿಕ್ಕಿನಲ್ಲಿಯೂ ಇರುವದರಿಂದಲೂ ಅವರು ಯಾರು ಯಾರೆಂದು ಪೂರ್ಣವಾಗಿ ತಿಳಿಯುವದು ಕಷ್ಟಸಾಧ್ಯವಾದುದರಿಂದಲೂ ಈ ಮಂತ್ರದಲ್ಲಿ ಆಯಾ ದಿಕ್ಕಿನಲ್ಲಿ ಯಾವಯಾವ ದೇವತೆಗಳಿರುವರೋ ಅವರೆಲ್ಲರಿಗೂ ನಮಸ್ಕಾರಗಳು–ಎಂದು ಒಟ್ಟಾಗಿ ತಿಳಿಸಲಾಗಿದೆ.

ಸಂಧ್ಯಾವಂದನೆಯಂಥ ನಿತ್ಯಕರ್ಮದಲ್ಲಿ ದೇವತಾವಂದನೆಯನ್ನೂ ಒಂದು ಅಂಗವಾಗಿ ಸೇರಿಸಿರುವದು ಔಚಿತ್ಯಪೂರ್ಣವಾಗಿದೆ. ನಾವು ಪ್ರತ್ಯೇಕವಾಗಿ ದೇವತಾರ್ಚನೆ, ಸ್ತುತಿ, ನಮಸ್ಕಾರಗಳನ್ನು ಕೈಗೊಳ್ಳುವದು ಸಮಯಾಭಾವ, ಅಶಕ್ತತೆ, ಆಲಸ್ಯಾದಿಕಾರಣಗಳಿಂದ ಅಸಾಧ್ಯವೆನಿಸಿದಾಗ ಅಚ್ಚುಕಟ್ಟಾಗಿ ಸಂಧ್ಯಾವಂದನೆಯನ್ನಾದರೂ ಮಾಡಿದಲ್ಲಿ ಉಳಿದೆಲ್ಲ ಅನುಷ್ಠಾನಗಳ ಫಲವೂ ಬಂದೀತು. ದೇವತೆಗಳೂ ತೃಪ್ತರಾಗುತ್ತಾರೆ. ವೈದಿಕಸಾಹಿತ್ಯದಲ್ಲಿರುವ ಉಪದೇಶದಂತೆ ಭಾರತೀಯನಾಗಿ ಜನಿಸಿದ, ವರ್ಣಾಶ್ರಮಧರ್ಮದ ಚೌಕಟ್ಟಿನಲ್ಲಿ ಜನ್ಮತಾಳಿರುವ ವ್ಯಕ್ತಿಯು ದೇವತೆಗಳು, ಋಷಿಗಳು, ಪಿತೃಗಳು– ಎಂಬ ಮೂವರನ್ನು ಆರಾಧಿಸಿ ತನ್ನ ಸಾಲವನ್ನು ಬಗೆಹರಿಸಿಕೊಳ್ಳಬೇಕಾಗಿದೆ. ಈ ಭಾವನೆಯುಳ್ಳ ಪ್ರತಿಯೊಬ್ಬನೂ ಮೊದಲು ಸರಿಯಾಗಿ ಸಂಧ್ಯಾಕರ್ಮವನ್ನಾಚರಿಸಿದರೆ ದೇವತಾದಿಗಳೆಲ್ಲರೂ ತೃಪ್ತರಾಗಿ ಇಷ್ಟಾರ್ಥಗಳನ್ನು ಅನುಗ್ರಹಿಸುವರು. ಸಂಧ್ಯಾವಂದನೆಯ ಮಹತ್ತ್ವವು ಹೀಗಿದೆ. ಈ ಮಂತ್ರದ ಮುಂದಿನ ಭಾಗವನ್ನು ಮತ್ತೆ ವಿಚಾರಮಾಡೋಣ.

# ಗುರುಶಿಷ್ಯಸಂವಾದ

**ಶಿಷ್ಯ :** ಗುರುಗಳೆ, ನವಗ್ರಹಗಳಲ್ಲಿ ರಾಹು, ಕೇತುಗಳ ಪರಿಚಯವನ್ನು ಈಗ ಮಾಡಿಕೊಡೋಣವಾಗಲಿ; ಅಲ್ಲಿಗೆ ಒಂಭತ್ತು ಗ್ರಹಗಳನ್ನೂ ಅರಿತಂತಾಗುವದು.

**ಗುರು :** ಆಗಲಿ; ರಾಹು-ಕೇತುಗಳಿಬ್ಬರನ್ನೂ ಸೂರ್ಯಚಂದ್ರರಿಗೆ ವೈರಿಗಳೆನ್ನುತ್ತಾರೆ. ವೈಜ್ಞಾನಿಕವಾಗಿ ಇವರನ್ನು ಛಾಯಾಗ್ರಹಗಳೆನ್ನುವಂತೆಯೇ ವೈದಿಕಪೌರಾಣಿಕವಾಗಿಯೂ ಛಾಯಾಗ್ರಹಗಳೆಂದೇ ಒಪ್ಪಿದೆ. ಆದ್ದರಿಂದ ಇವರಿಗೆ ಸ್ವಂತವಾದ ಅಸ್ತಿತ್ವವಿಲ್ಲ. ಇವರು ಕಾಣಿಸಿಕೊಳ್ಳುವಲ್ಲಿ ಸೂರ್ಯಚಂದ್ರರ ಆಶ್ರಯವು ಬೇಕೇಬೇಕು. ಜ್ಯೋತಿಷ್ಯಶಾಸ್ತ್ರದಲ್ಲಿ ಇವರಿಬ್ಬರನ್ನೂ ಮೇಷಾದಿ ರಾಶಿಗಳಲ್ಲಿ ಯಾವದೊಂದಕ್ಕೂ ಅಧಿಪತಿಗಳನ್ನಾಗಿ ಅಂಗೀಕರಿಸಿರುವದಿಲ್ಲ. ಆದರೆ 'ಶನಿವದ್ರಾಹುಃ', 'ಕುಜವತ್‌ಕೇತುಃ' ಎಂಬ ಅಭಿಯುಕ್ತೋಕ್ತಿಯು ಇದೆ. ರಾಹುವನ್ನು ಶನಿಯಂತೆಯೂ ಕೇತುವನ್ನು ಕುಜನಂತೆಯೂ ತಿಳಿಯಬೇಕೆಂದು ಈ ವಾಕ್ಯಗಳ ಅರ್ಥ. ದಶಾನಾಯಕರ ಗುಂಪಿನಲ್ಲಿ ಮಾತ್ರ ಇವರಿಬ್ಬರೂ ಸೇರಿದ್ದಾರೆ. ಆದರೆ ವಾರಾಧಿಪತಿಗಳಲ್ಲಿ ಸೇರಿಲ್ಲ. ವಾರಗಳು ಏಳು ಮಾತ್ರವೇ ಇದ್ದು ರಾಹುವಾರ ಕೇತುವಾರ ಎಂಬಿವು ಚಾಲ್ತಿಯಲ್ಲಿಲ್ಲ. ಅಲ್ಲದೆ ಇವರಿಬ್ಬರೂ ಮೇಷಾದಿರಾಶಿಗಳನ್ನು ಅಪ್ರದಕ್ಷಿಣೆಯಾಗಿ ಸುತ್ತುತ್ತಾರೆ. ಪರಸ್ಪರ ಯಾವಾಗಲೂ ಏಳನೇ ಮನೆಗಳಲ್ಲಿರುತ್ತಾರೆ. ಇವರ ಸಂಚಾರವು ಹೇಗೆಂದರೆ ಅಶ್ವಿನಿಯಿಂದ ರೇವತೀನಕ್ಷತ್ರಕ್ಕೆ ಹೋಗುತ್ತಾರೆಯೇ ಹೊರತು ಭರಣೀನಕ್ಷತ್ರಕ್ಕೆ ಬರುವದಿಲ್ಲ. ಹೀಗೆಲ್ಲ ಉಳಿದ ಏಳು ಗ್ರಹಗಳಿಗೂ ಇವರಿಗೂ ಕೆಲವು ವೈಲಕ್ಷಣ್ಯಗಳಿದ್ದರೂ ಇವರಿಬ್ಬರ ಸೇರ್ಪಡೆಯಾಗದೆ 'ನವಗ್ರಹ'ಗಳಾಗುವದಿಲ್ಲ. ಜ್ಯೋತಿಷ್ಯಫಲಭಾಗದಲ್ಲಿಯೂ ಇವರ ಪ್ರಭಾವವಿದೆ. ಆದ್ದರಿಂದ ಗ್ರಹಾರಾಧಕರು ಇವರನ್ನೂ ಪೂಜಿಸಬೇಕು. ಗ್ರಹಯಜ್ಞಗಳಲ್ಲಿ ಆಹುತ್ಯಾದಿಗಳಿಂದ ಇವರನ್ನೂ ತೃಪ್ತಿಗೊಳಿಸಬೇಕು. ಆದ್ದರಿಂದ ದೇವತಾರೂಪದಿಂದ ಇವರ ಮಹಿಮೆಯನ್ನು ಕೇಳು.

ರಾಹುವು ಬರ್ಬರದೇಶದಲ್ಲಿ ಜನಿಸಿರುವನು. ಪೈಠೀನಸಗೋತ್ರದವನು. ಆಂಗೀರಸಋಷಿಯಿಂದ ಪೂಜಿಸಲ್ಪಡುವವನು. ಅಶ್ವಿನೀನಕ್ಷತ್ರಜಾತನು. ಗಾಯತ್ರೀಚ್ಛಂದಸ್ಕನು. ಹುತಾಶನನೆಂಬ ಅಗ್ನಿಪೂಜಕನು. ಕಪ್ಪುಬಣ್ಣದವನು. ಎರಡು ತೋಳುಗಳುಳ್ಳವನಾಗಿ ಖಡ್ಗ-ಚರ್ಮಗಳನ್ನು ಧರಿಸಿರುವನು. ಗೋಮೇಧಿಕವೆಂಬ ರತ್ನದ ಆಭರಣಗಳಿಂದ ಅಲಂಕೃತನಾಗಿ ಕಿರೀಟ, ಛತ್ರ, ಧ್ವಜಗಳಿಂದ ಶೋಭಿಸುತ್ತಿರುವನು. ಎಂಟು ಕುದುರೆಗಳ ರಥವನ್ನೇರಿ ಮೇರುವನ್ನು ಅಪ್ರದಕ್ಷಿಣೆಯಾಗಿ ಸುತ್ತುವನು. ಇವನ ಬಲಭಾಗದಲ್ಲಿ ಗವಯನೆಂಬವನೂ ಎಡಭಾಗದಲ್ಲಿ ನಿರ್ಋತಿಯೆಂಬವನೂ ಇರುವನು. ಇಂಥ ರಾಹುವನ್ನು ಆರಾಧಿಸಿ ಹೀಗೆ ಸ್ತುತಿಸಬೇಕು. "ನೀಲಾಂಬರೋ ನೀಲವಪುಃ ಕಿರೀಟೀ ವರಪ್ರದಃ ಶೂಲಸಚರ್ಮಖಡ್ಗಃ । ಕರಾಳವಕ್ತ್ರಃ ಕರವಾಳಶೂಲೀ ಸಿಂಹಾಸನಸ್ಥೋ ವರದೋಽಸ್ತು ಮಹ್ಯಮ್"

ಇನ್ನು ಕೇತುವಿನ ಮಹಿಮೆಯನ್ನು ಕೇಳು. ಈತನು ಅಂತರ್ವೇದಿದೇಶೋತ್ಪನ್ನನು. ಜೈಮಿನಿಗೋತ್ರದವನು. ರೌದ್ರನೆಂಬ ಅಗ್ನ್ಯುಪಾಸಕನು. ಧೂಮ್ರ (ಹೊಗೆ)ವರ್ಣನು. ದ್ವಿಭುಜನಾಗಿದ್ದು ವರದ, ಗದಾಹಸ್ತನಾಗಿರುವನು. ಚಿತ್ರ ವರ್ಣದ ವಸ್ತ್ರಗಂಧಮಾಲ್ಯಾಲಂಕೃತನು. ವೈಡೂರ್ಯವೆಂಬ ರತ್ನಾಭರಣಸಂಪನ್ನನು. ಕೆಂಪು ಹಾಗೂ ಹೊಗೆಬಣ್ಣದ ಎಂಟು ಕುದುರೆಗಳ ರಥ, ಧ್ವಜ, ಪತಾಕಾದಿಗಳುಳ್ಳವನು. ಧೂಮ್ರರಥವನ್ನೇರಿ ಮೇರುವನ್ನು ಅಪ್ರದಕ್ಷಿಣಾಕಾರವಾಗಿ ಸುತ್ತುತ್ತಿರುವನು. ಇವನ ಬಲಭಾಗದಲ್ಲಿ ಬ್ರಹ್ಮನೂ ಎಡಭಾಗದಲ್ಲಿ ಚಿತ್ರಗುಪ್ತನೆಂಬವನೂ ಇರುವರು. ಇಂಥ ಕೇತುವನ್ನು ಆರಾಧಿಸಿ ಈ ಶ್ಲೋಕವನ್ನು ಪಠಿಸಬೇಕು. "ಧೂಮ್ರೋ ದ್ವಿಬಾಹುರ್ವರದೋ ಗದಾಭೃತ್ ಗೃಧ್ರಾಸನಸ್ಥೋ ವಿಕೃತಾನನಶ್ಚ। ಕಿರೀಟಕೇಯೂರವಿಭೂಷಿತಾಂಗಃ ಸದಾಸ್ತು ಮೇ ಕೇತುಗಣಃ ಪ್ರಶಾಂತಃ"

**ಶಿಷ್ಯ :** ನವಗ್ರಹಗಳೊಡನೆ ಬೇರೆ ಯಾವದಾದರೂ ದೇವತೆಗಳನ್ನು ಆರಾಧಿಸಬೇಕೆ ? ಹಾಗಿದ್ದರೆ ಅವರುಗಳು ಯಾರು ?

**ಗುರು :** ಹೇಳುತ್ತೇನೆ, ಕೇಳು. ನವಗ್ರಹಗಳೊಡನೆ ದಿಕ್ಪಾಲಕರುಗಳನ್ನೂ ಸಾದ್ಗುಣ್ಯದೇವತೆಗಳನ್ನೂ ಆರಾಧಿಸಬೇಕು. ಇಂದ್ರಾದಿದಿಕ್ಪಾಲಕರು ನಿನಗೆ ತಿಳಿದೇ ಇದೆಯಷ್ಟೆ. ಸಾದ್ಗುಣ್ಯದೇವತೆಗಳೆಂದರೆ ದುರ್ಗಾ, ಗಣಪತಿ, ಕ್ಷೇತ್ರಪಾಲ, ವಾಸ್ತುಪುರುಷ, ಅಭಯಂಕರ, ತ್ರ್ಯಂಬಕ, ಶ್ರೀಃ– ಎಂಬವರುಗಳು. ಹೀಗೆ ನವಗ್ರಹಗಳಿಗೆ ಅಧಿದೇವತೆಪ್ರತ್ಯಧಿದೇವತೆಗಳೂ ಸೇರಿ ಒಟ್ಟು ೨೭, ದಿಕ್ಪಾಲಕರು ೮, ಸಾದ್ಗುಣ್ಯದೇವತೆಗಳು ೭– ಒಟ್ಟು ೪೨ ಜನ ದೇವತೆಗಳಾಗುವರು. ಈ ಇಡಿಯ ಗುಂಪನ್ನೇ ಆರಾಧಿಸುವ ಪದ್ಧತಿಯು ಇದೆ.

**ಶಿಷ್ಯ :** ಈ ದೇವತೆಗಳನ್ನೆಲ್ಲ ತೃಪ್ತಿಗೊಳಿಸಲು ಪೂಜೆಯೊಂದೇ ಸಾಕೆ ?

**ಗುರು :** ಸಾಲದು. ಪೂಜಾರಾಧನೆಗಳ ಜೊತೆಗೆ ಜಪ-ಹೋಮ-ತರ್ಪಣ-ದಾನಗಳನ್ನೂ ಮಾಡಬೇಕಾಗುವದು. ಹೇಗೆಂದರೆ ಅಗ್ನಿಮುಖಪೂರ್ವಕವಾಗಿ ಆಯಾ ದೇವತೆಗಳಿಗೆ ಹೇಳಿರುವ ಸಮಿತ್ತು– ಚರು (ಅನ್ನ) ಆಜ್ಯ (ತುಪ್ಪ)-ಗಳಿಂದ ಮಂತ್ರಪೂರ್ವಕವಾಗಿ ಋತ್ವಿಜರ ಸಹಾಯದಿಂದ ಹೋಮವನ್ನು ಆಚರಿಸಬೇಕು. ಅದೇ ಸಮಕಾಲದಲ್ಲಿಯೇ ತರ್ಪಣವನ್ನೂ ಕೊಡಬೇಕು. ಹೋಮಕ್ಕೆ ಮುಂಚೆಯೇ ಹೋಮಸಂಖ್ಯೆಯ ಹತ್ತುಪಟ್ಟು ಅಧಿಕವಾಗಿ ಆಯಾ ದೇವತಾಮಂತ್ರವನ್ನು ಜಪ ಮಾಡಿರಬೇಕು. ಹೋಮಾನಂತರ ಆಯಾ ಗ್ರಹದೇವತಾಪ್ರೀತ್ಯರ್ಥವಾಗಿ ಧಾನ್ಯ-ದಕ್ಷಿಣೆಗಳನ್ನು ದಾನವಾಗಿ ನೀಡಬೇಕು. ಹೀಗೆ ಗ್ರಹದೇವತೆಗಳ ಆರಾಧನೆಯು ವಿಶಿಷ್ಟರೀತಿಯಲ್ಲಿರುವದು. ಗ್ರಹಗಳೆಲ್ಲವೂ ಪ್ರತ್ಯಕ್ಷದೇವತೆಗಳಾದ್ದರಿಂದ ನಿಸ್ಸಂಶಯವಾಗಿ ದೇವತಾರಾಧನೆಯನ್ನು ಕೈಗೊಳ್ಳಬಹುದು. ವೈಜ್ಞಾನಿಕದೃಷ್ಟಿಯನ್ನವಲಂಬಿಸಿ ತರ್ಕಮಾಡುತ್ತಾ ಕುಳಿತರೆ ದೇವತೆಗಳ ಪ್ರಸಾದವು ಸಿಗಲಾರದು.

---

# ದರ್ಪದ ವಿಲಾಸ

(ಶ್ರೀ ಸ್ವಾಮಿ ಶಿವಾನಂದಸರಸ್ವತಿಯವರು, ಋಷಿಕೇಶ)

**ಯಾ ದೇವೀ ಸರ್ವಭೂತೇಷು ದರ್ಪರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ॥**

ಸೊಕ್ಕು ಎಂಬುದನ್ನು ಸಂಸ್ಕೃತದಲ್ಲಿ ದರ್ಪ ಎಂಬ ಮಾತಿನಿಂದ ತಿಳಿಸುತ್ತಾರೆ. ಸೊಕ್ಕೆಂದರೆ ತಾನೇ ಹೆಚ್ಚಿನವನೆಂದು ಇಲ್ಲದ ಹೆಮ್ಮೆಯನ್ನು ವಹಿಸುವದು. ಅದು ರಜಸ್ತಮೋಗುಣಗಳ ಮಿಶ್ರವಾದ ಅಹಂಕಾರವು, ಒಗರು, ಒರಟುತನವು, ದುರಭಿಮಾನವು, ಸಲ್ಲದ ನಡತೆಯು, ಅವಿವೇಕವು. ಅಹಂಕಾರದ ಪರಿಣಾಮವಾಗಿರುವ ಇದೂ ಅಹಂಕಾರವೇ. ಇದು ಅಜ್ಞಾನದಿಂದ ಹುಟ್ಟಿರುವದು. ಮೋಹದಿಂದ ವಂಚಿತರಾಗಿರುವ ಜೀವರುಗಳ ದರ್ಪದ ಮೂಲಕ ಮಾಯೆಯು ತನ್ನ ಲೀಲೆಯನ್ನು ನಡೆಸಿಕೊಂಡುಬರುತ್ತಿರುವಳು.

ಒಬ್ಬನು ತನಗಿಂತ ಹಿರಿಯನಾದವನನ್ನು ಅಸಡ್ಡೆಮಾಡಿ ಒಗರಿನಿಂದ ಅವನನ್ನು ತಿರಸ್ಕರಿಸಿ ಕುಚೇಷ್ಟೆಮಾಡಿ ಹೀಯಾಳಿಸುತ್ತಾನೆ. ಇದೇ ಸೊಕ್ಕು ಅಥವಾ ದರ್ಪವು. ಇನ್ನೊಬ್ಬನು ಒಬ್ಬನಮೇಲೆ ಸಿಟ್ಟುಮಾಡಿ "ಎಲಾ, ನಾನು ಯಾರು ಬಲ್ಲೆಯ ? ನಿನ್ನ ಹಲ್ಲುಮುರಿದೇನು ; ತಲೆಬುರುಡೆಯನ್ನು ಒಡೆದೇನು, ಜೋಕೆ, ನಿನ್ನ ರಕ್ತವನ್ನೇ ಕುಡಿದುಬಿಟ್ಟೇನು !" ಎನ್ನುವನು. ಇದೇ ಸೊಕ್ಕು. ಸಾಮಾನ್ಯವಾಗಿ ಅಂತರ್ಮುಖನಾಗದೆ, ಆತ್ಮಪರೀಕ್ಷೆಮಾಡಿಕೊಳ್ಳದೆ ಇರುವ ವಿಚಾರಶೂನ್ಯನು "ನನ್ನಲ್ಲಿ ಯಾವ ದರ್ಪವೂ ಇಲ್ಲವೇಇಲ್ಲ, ನಾನು ಅಮಾನಿಯು ; ಶಾಂತನು ; ದಯಾಳುವು" ಎಂದುಕೊಳ್ಳುತ್ತಾನೆ. ಆದರೆ ಸಮಯವು ಬಂದರೆ ಸಾವಿರಸಲ ಇದೇ ತಪ್ಪನ್ನು ಮಾಡುತ್ತಾನೆ. ದರ್ಪದ ಶಕ್ತಿಯೂ ಮಹಿಮೆಯೂ ಇಂಥದ್ದು !

ಸಾಧಕನೊಬ್ಬನು ಬಹಳ ಒಳ್ಳೆಯವನಾಗಿರುತ್ತಾನೆ. ಬಹಳ ಬುದ್ಧಿಶಾಲಿಯಾಗಿದ್ದು ತುಂಬ ಓದಿರುತ್ತಾನೆ. ಅವನು ಹಲವು ಭಾಷಣಗಳನ್ನು ಮಾಡುತ್ತಿರುತ್ತಾನೆ. ಏಕಾಂತವಾಗಿ ಒಂದು ಕೋಣೆಯಲ್ಲಿ ಕುಳಿತು ದೀರ್ಘಕಾಲದವರೆಗೂ ಧ್ಯಾನವನ್ನು ಮಾಡುತ್ತಿರುತ್ತಾನೆ. ಆದರೂ ಅವನಿಗೆ ದರ್ಪವಿಲ್ಲದೆ ಇರುವದಿಲ್ಲ. ಅವನ ಸಂಕಲ್ಪಕ್ಕೆ ಅಥವಾ ಅಭಿಲಾಷೆಗೆ ವಿರುದ್ಧವಾಗಿ ಯಾವನಾದರೂ ನಡೆದುಕೊಂಡರೆ, ಅವನ ವಿಷಯದಲ್ಲಿ ಯಾವನಾದರೂ ಕೆಟ್ಟದ್ದನ್ನು ಆಡಿದರೆ, ಅಥವಾ ಏನಾದರೂ ದೋಷವನ್ನು ಆರೋಪಿಸಿದರೆ, ಅಥವಾ ಯಾರೂ ಅವನನ್ನು ಗೌರವಿಸದಿದ್ದರೆ ಅವನು ದೃಪ್ತನಾಗುತ್ತಾನೆ ; ಬಹಳ ಒರಟಾಗಿ ನಡೆದುಕೊಳ್ಳುತ್ತಾನೆ.

ನಿಮ್ಮ ಮನಸ್ಸಿನ ವಿಚಾರಗಳನ್ನೂ ನೀವು ಆಡುವ ಮಾತುಗಳನ್ನೂ ಮಾಡುವ ಕಾರ್ಯಗಳನ್ನೂ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರಿ. ಮಾತುಗಳಿಗೆ

ಇರುವ ಶಕ್ತಿಯನ್ನರಿತು ಅವನ್ನು ಎಚ್ಚರಿಕೆಯಿಂದ ಪ್ರಯೋಗಿಸುತ್ತಿರಿ. ಎಲ್ಲರನ್ನೂ ಗೌರವಿಸುತ್ತಿರಿ. ಇಂಪಾದ ಮಿತವಾದ ಮಾತುಗಳನ್ನೇ ಆಡುತ್ತಿರಿ. ದಯಾಳು ಗಳಾಗಿರಿ. ತಾಳ್ಮೆ, ಪ್ರೇಮ, ಅಮಾನಿತ್ವ- ಇವುಗಳನ್ನೇ ಅಭ್ಯಾಸಮಾಡುತ್ತಿರಿ. ವಿಚಾರಶೀಲರಾಗಿರಿ, ಮೌನವ್ರತವನ್ನು ಆಚರಿಸುತ್ತಿರಿ. "ಜಗತ್ತು ಮಿಥ್ಯೆ ವಾದದ್ದು, ಸೊಕ್ಕಿನಿಂದ ನನಗೆ ಆಗುವ ಲಾಭವು ಯಾವದು?" ಎಂದು ಮನಸ್ಸಿನಲ್ಲಿ ಮತ್ತೆಮತ್ತೆ ಅಂದುಕೊಳ್ಳುತ್ತಿರಿ. ಇದಕ್ಕೆ ವಿರುದ್ಧವಾದ 'ಅಮಾನಿತ್ವ' ಎಂಬ ಗುಣ ದಿಂದಾಗುವ ಅಪರಿಮಿತಪ್ರಯೋಜನವನ್ನೂ ಚಿಂತಿಸಿಕೊಳ್ಳುತ್ತಿರಿ.

ನೂರು ಸಲ ನೀವು ಸೋತಿರಬಹುದು. ಆದರೂ ಮತ್ತೊಮ್ಮೆ ಎದ್ದುನಿಂತು 'ನಿನ್ನೆ ತಪ್ಪಾಯಿತು; ಆದರೆ ಇಂದು ಅಮಾನಿಯಾಗಿ ದಯಾಳುವಾಗಿ ಶಾಂತ ನಾಗಿರುವೆನು' ಎಂದು ದೃಢಸಂಕಲ್ಪಮಾಡಿಕೊಳ್ಳಿರಿ. ಸ್ವಲ್ಪಸ್ವಲ್ಪವಾಗಿ ನಿಮ್ಮ ಸಂಕಲ್ಪಶಕ್ತಿಯು ಬೆಳೆದುಕೊಳ್ಳುವದು. ಶಾಂತಿಗೂ, ಭಕ್ತಿಗೂ, ಜ್ಞಾನಕ್ಕೂ ವೈರಿಯಾಗಿರುವ ದರ್ಪವನ್ನು ನೀವು ಖಂಡಿತ ಜಯಿಸುವಿರಿ. ಸಂದೇಹವಿಲ್ಲ.

ನೀವು ಎಷ್ಟೇ ಎಚ್ಚರಿಕೆಯಿಂದಿದ್ದರೂ ದರ್ಪವು ಬುಸುಗುಟ್ಟುತ್ತಾ ಪ್ರತಿ ದಿನವೂ ತನ್ನ ಹೆಡೆಯನ್ನು ಹಲವುಬಾರಿ ಎತ್ತುತ್ತಲೇ ಇರುತ್ತದೆ. ವಿವೇಕದ ಕೋಲನ್ನೂ ಅಮಾನಿತ್ವದ ಕತ್ತಿಯನ್ನೂ ಎತ್ತಿ ಅದರ ತಲೆಯನ್ನು ತುಂಡರಿಸಿರಿ. ಈ ದರ್ಪವೆಂಬುದು ಲಕ್ಷಗಟ್ಟಲೆ ತಲೆಗಳುಳ್ಳ ರಕ್ತಬೀಜನಂಥ ಅಸುರನು. ದರ್ಪಕ್ಕೆ ಮತ್ತೆಮತ್ತೆ ತಲೆಗಳು ಉಂಟಾಗುತ್ತಲೇ ಇರುವವು. ಇನ್ನಷ್ಟು ವೀರತನದಿಂದ, ಇನ್ನಷ್ಟು ಶಕ್ತಿಯಿಂದ, ಬಲದಿಂದ, ಕದನವನ್ನು ಮುಂದುವರೆಸಿರಿ. ಸ್ತೋತ್ರ, ಧ್ಯಾನ, ವಿಚಾರ, ಬ್ರಹ್ಮಚರ್ಯ, ಶಮ, ಜಪ, ಕೀರ್ತನೆ, ಪ್ರಾಣಾಯಾಮ- ಇವು ಗಳನ್ನೆಲ್ಲ ಸೇರಿಸಿಕೊಂಡು ಸಾಧನಮಾಡಿರಿ. ಹೀಗೆ ಯೋಗಸಮುಚ್ಚಯವನ್ನುಪ ಯೋಗಿಸಿದರೆ ದರ್ಪಾಸುರನು ಸಂಪೂರ್ಣವಾಗಿ ಸುಟ್ಟು ಬೂದಿಯಾಗುವನು.

ದೃಪ್ತನಾದವನು ಒಂದು ಗವಿಯಲ್ಲಿ ಅಥವಾ ಕೋಣೆಯಲ್ಲಿ ಕುಳಿತುಕೊಂಡಿ ದ್ದರೆ ಈ ವೃತ್ತಿಯನ್ನು ನಿರ್ಮೂಲನಮಾಡುವದಕ್ಕೆ ಅವನಿಗೆ ಅವಕಾಶವು ದೊರೆಯು ಲಾರದು. ಸಾಧಕನಾದವನು ಬಗೆಬಗೆಯ ಮನಃಸ್ಥಿತಿಯವರ, ಬೇರೆಬೇರೆಯ ಸ್ವಭಾವದವರ ಜೊತೆಯಲ್ಲಿದ್ದುಕೊಂಡು ತನ್ನನ್ನು ಯಾರಾದರೂ ತಿರಸ್ಕರಿಸುವಾಗ ಅಪಮಾನಕ್ಕೊಳಗುಮಾಡುವಾಗ, ಗೋಳುಗುಟ್ಟಿಸುವಾಗ- ತನ್ನ ಮನಸ್ಸಿನ ವೃತ್ತಿ ಗಳು ಹೇಗಿರುವವೆಂಬುದನ್ನು ಪರೀಕ್ಷಿಸಿಕೊಳ್ಳುತ್ತಿರಬೇಕು. ಎಂಥ ಇಕ್ಕಟ್ಟಿನ ಸಂದರ್ಭಗಳಲ್ಲಿಯೂ ಶಾಂತನಾಗಿ ಏರುಪೇರಿಲ್ಲದೆ ಅಮಾನಿಯಾಗಿದ್ದರೆ ಈ ಭಯಂ- ಕರಶತ್ರುವನ್ನು ತಾನು ನಿರ್ಮೂಲಮಾಡಿದೆನೆಂದು ನಂಬಬಹುದು. ನಿಮಗೆಲ್ಲರಿಗೂ ಈತನ ಕಾಟವು ತಪ್ಪಲಿ! ಈ ಅಸುರನನ್ನು ಜಯಿಸಿ ನೀವೆಲ್ಲರೂ ನಿತ್ಯಾನಂದವನ್ನೂ ಅಮೃತತ್ವವನ್ನೂ ಹೊಂದುವಂತಾಗಲಿ!

# ಉಪಕಾರಸ್ಮರಣೆ

**ಪತ್ರಿಕೆಗೆ ನೂತನ ಮಹಾಪೋಷಕರುಗಳು :** ಶ್ರೀಯುತರುಗಳಾದ : MPN. 938. ಪಿ. ಸುಬ್ರಹ್ಮಣ್ಯಶಾಸ್ತ್ರಿಯವರು, ಧಾರವಾಡ ; 939. ಶ್ರೀಮತಿ ಮಮತಾ ಎ. ರಾಮಚಂದ್ರರಾವ್‌ರವರು, Lafayetti (Indiana) ; 940. ಡಿ. ಆರ್. ಸುಬ್ರಹ್ಮಣ್ಯಂರವರು, ಬೆಂಗಳೂರು ; 941. ಸುಜಾತಾರಮೇಶ್‌ರವರು, ಬೆಂಗಳೂರು ; ಈ ಮಹನೀಯರುಗಳು ರೂ. ೧೫೧ರಂತೆ ನೀಡಿರುತ್ತಾರೆ. MPO. 212. ಡಿ. ನಾರಾಯಣಸ್ವಾಮಿಮೊದಲಿಯಾರ್‌ರವರು, ಬೆಂಗಳೂರು ; 221. ಹೆಚ್. ಎಸ್. ರಾಮಶೇಷಶೆಟ್ಟರು, ಬೆಂಗಳೂರು ; 328. ಎಸ್. ವಿ. ಪ್ರಕಾಶ್ ರವರು, ಚಿಕ್ಕಮಗಳೂರು; 345. ಎ.ಆರ್. ಶೇಷಾದ್ರಿಯವರು, ಚಿಕ್ಕಮಗಳೂರು; 538. ಹೆಚ್.ವಿ. ದೇವರಾಜುರವರು, ಹಾಸನ– ಈ ಮಹನೀಯರುಗಳು ರೂ. ೫೧ ರಂತೆ ಹೆಚ್ಚಿನ ಮಹಾಪೋಷಣದ್ರವ್ಯವನ್ನು ನೀಡಿ ಪತ್ರಿಕೆಯನ್ನು ಪ್ರೋತ್ಸಾಹಿಸಿದ್ದಾರೆ.

**೫೬ನೆಯ ಸಂಪುಟಕ್ಕೆ ಪೋಷಕರುಗಳು :** (೨ನೆಯ ಸಂಚಿಕೆಯಿಂದ ಮುಂದುವರೆದದ್ದು) ಶ್ರೀಗಳಾದ : ಚಂದ ನಂ. 417. ಎಸ್. ವಿರೂಪಾಕ್ಷಯ್ಯನವರು, ತೊಂಡೆಭಾವಿ ; 419. ಎಂ.ಎನ್. ವೆಂಕಟೇಶ್, ಮಾಲೂರು ; 420. ಡಿ. ರಘುನಾಥರಾಯರು, ಮಂಗಳಾದೇವಿ (ಬೋಳಾರು) ; 432. ಹೆಚ್. ಆರ್. ಸತ್ಯಭಾಮಾರವರು, ತಿಪಟೂರು ; 454. ಕೆ. ನಾಗರಾಜರವರು, ಮದ್ರಾಸ್ ; 458. ಜಿ.ಎಸ್. ಪತ್ತಾರರವರು, ಲಿಂಗಸೂಗೂರು ; 464. ವೇ॥ ಮಳಲಿ ರಾಮಭಟ್ಟರು, ತರೀಕೆರೆ ; 465. ಹೆಚ್. ಎಂ. ಕೃಷ್ಣಮೂರ್ತಿಯವರು, ದಾವಣಗೆರೆ ; 474. ಪಿ. ರಾಮಭದ್ರಕೇಕುಡರವರು, ಅರಳಸುರುಳಿ ; 485. ಎನ್. ನಾಗರಾಜಗುಪ್ತರು, ಪಾಂಡವಪುರ ; 488. ಹೆಚ್. ಎಸ್. ಯೋಗಾನರಸಿಂಹರವರು, ಬೆಂಗಳೂರು; 489. ವೈ.ಎಸ್. ಗುಂಡಪ್ಪನವರು, ಶಿವಮೊಗ್ಗ–ಈ ಮಹನೀಯರುಗಳು ರೂ. ೨೦ರಂತೆ ಪೋಷಣದ್ರವ್ಯವನ್ನು ನೀಡಿ ಪ್ರೋತ್ಸಾಹಿಸಿದ್ದಾರೆ.

1986ನೆಯ ಸೆಪ್ಟೆಂಬರ್ ಮಾಹೆಯಲ್ಲಿ ಈ ಕೆಳಗೆ ಕಂಡಂತೆ ಸಹಾಯದ್ರವ್ಯವನ್ನು ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ :—

**ಗ್ರಂಥಪ್ರಕಟನನಿಧಿಗೆ :** ಶ್ರೀಗಳಾದ ಜೆ. ಅರ್. ಅನಂತರಾಮನ್‌ರವರು (ವೇ॥ ಜೆ. ರಾಮನಾರಾಯಣಾವಧಾನಿಗಳವರ ಪುತ್ರರು) ಕೋಟೆರಸ್ತೆ, ಶಿವಮೊಗ್ಗ (ಭಗವದ್ಗೀತೆಯ ಉಪನ್ಯಾಸಗಳು–ಎಂಬ ಗ್ರಂಥಕ್ಕೆ) ರೂ. ೫೦೦೦ ; ಶ್ರೀಮತಿ ಕೆ.ವಿ. ಮಂಗಳಾಂಬರವರು, ಚಿತ್ರದುರ್ಗ ರೂ. ೨೫– ಒಟ್ಟು ರೂ. ೫,೦೨೫.

**ಪೂಜಾಮಂದಿರನಿಧಿಗೆ :** ಶ್ರೀ॥ ಎಂ. ಎನ್. ರಾಮಸ್ವಾಮಿಗಳವರು, ಮತ್ತೂರು, ರೂ. ೧೧೦ ; ಯಾದಾಳಂ ವಂಶೀಕರು ರೂ. ೧೫; ಒಟ್ಟು ರೂ. ೧೨೫.

**ಸಂನ್ಯಾಸಿಗಳ ಸತ್ಕಾರಖಾತೆಗೆ :** ಶ್ರೀ ಎನ್.ಎಲ್. ರಾಮಚಂದ್ರರವರು, ಬೆಂಗಳೂರು ರೂ. ೧೦ ; ಕೆ. ವಿ. ಲಲಿತಾಂಬರವರು, ಹೊಳಲ್ಕೆರೆ ರೂ. ೧೦– ಒಟ್ಟು ರೂ. ೨೦.

**ಗುರುಮಂದಿರನಿಧಿಗೆ :** ಶ್ರೀಗಳಾದ : ಎಸ್. ಕೃಷ್ಣಮೂರ್ತಿಯವರು, ಕೋಲಾರ ರೂ. ೧೦ ; ಶ್ರೀಮತಿ ಜಯಶ್ರೀರವರು, ಬೆಂಗಳೂರು (ಮಾವಂದಿರು ಹೆಚ್. ಕೆ. ಸುಬ್ರಹ್ಮಣ್ಯಂರವರ ಆತ್ಮಶಾಂತಿಗಾಗಿ) ರೂ. ೧೫೫ ; ಯಾದಾಳಂ ವಂಶೀಕರು, ಬೆಂಗಳೂರು ರೂ. ೧೦ ; ಹೆಚ್.ಕೆ.ಹೆಚ್. ರಾವ್‌ರವರು, ಬಲಸೂರು ರೂ. ೧೦– ಒಟ್ಟು ರೂ. ೧೮೫.

**ವಿಶೇಷಕೃತಜ್ಞತೆ:** ಶ್ರೀಯುತರುಗಳಾದ ಬಿ. ಸುಬ್ಬರಾಯರು, ದಾವಣಗೆರೆ; ಟಿ.ಎಸ್. ಬಾಲಕೃಷ್ಣರವರು, ತಿಪಟೂರು ; ಕೆ. ರಾಮಮೋಹನ್‌ರವರು, ಚಿಕ್ಕಮಗಳೂರು ; ಎಂ.ಕೆ. ಕೃಷ್ಣಪ್ಪನವರು, ಬೆಂಗಳೂರು ; ಕೆ.ಜಿ. ಸುಬ್ರಾಯಶರ್ಮರವರು, ಬೆಂಗಳೂರು ; ವೇದಾಂತ ಬುಕ್ ಹೌಸ್, ಚಾಮರಾಜಪೇಟೆ-ಬೆಂಗಳೂರು; ಆರ್.ಎ. ಉಪನಾಳರವರು, ಇಲಕಲ್; ಹೆಚ್.ಎಲ್. ಕೆಂಭೂಳಿಯವರು, ಇಲಕಲ್; ಶ್ರೀಮತಿ ನಾಗಮ್ಮ ಶಂಕರರಾವ್‌ರವರು, ಮೈಸೂರು– ಈ ಮಹಾಶಯರುಗಳು ಹೊಸಸಂಪುಟಕ್ಕೆ ಚಂದಾದಾರರುಗಳನ್ನೂ ಮಹಾಪೋಷಕರುಗಳನ್ನೂ ಒದಗಿಸಿಕೊಟ್ಟು ಪತ್ರಿಕೆಯ ಪ್ರಚಾರವನ್ನು ಕೈಗೊಂಡು ಉಪಕಾರಮಾಡಿರುತ್ತಾರೆ. ಶ್ರೀ॥ ಕೆ.ಎಸ್. ಜನಾರ್ದನ್, ಬೆಂಗಳೂರು–ಇವರು ಪತ್ರಿಕೆಗೆ ಕೆಲವು ಜಾಹಿರಾತುಗಳನ್ನು ಒದಗಿಸಿಕೊಟ್ಟು ಸಹಾಯಮಾಡಿರುತ್ತಾರೆ.

ಮೇಲ್ಕಂಡ ಮಹಾಶಯರುಗಳೆಲ್ಲರಿಗೂ ನಮ್ಮ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸುವೆವು.

---

**ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ।**
**ಕಲಾ ಮುಹೂರ್ತಾಃ ಕಾಷ್ಠಾಶ್ಚಾಹೋರಾತ್ರಾಶ್ಚ ಸರ್ವಶಃ ॥**
**ಅರ್ಧಮಾಸಾ ಮಾಸಾ ಋತವಃ ಸಂವತ್ಸರಶ್ಚ ಕಲ್ಪಂತಾಮ್ ।**
**ಸ ಆಪಃ ಪ್ರದುಘೇ ಉಭೇ ಇಮೇ ಅಂತರಿಕ್ಷಮಥೋ ಸುವಃ ।೨॥**

ಈ ಮಂತ್ರದಲ್ಲಿ ಕಾಲವೂ ಪರಮೇಶ್ವರನಿಂದ ಸೃಷ್ಟವಾಗಿದೆ- ಎಂಬ ತತ್ತ್ವವನ್ನು ತಿಳಿಸಲು ಹೊರಟಿದೆ. ವಿಷ್ಣುಪುರಾಣದಲ್ಲಿ ಒಂದು ಕಡೆಯಲ್ಲಿ 'ಪ್ರಕೃತಿ, ಪುರುಷ, ಕಾಲ- ಇವು ನಿತ್ಯವೆಂದು ತಿಳಿ' ಎಂಬ ಉಪದೇಶವಿದೆ. ಆದ್ದರಿಂದ ಪರಮಪುರುಷನಂತೆಯೇ ಕಾಲಾದಿಗಳೂ ನಿತ್ಯವೆಂಬ ಸಂಶಯವು ಯಾರಿಗಾದರೂ ಬರಬಹುದು. ಅದನ್ನು ಪರಿಹರಿಸುವದಕ್ಕಾಗಿ ಇಲ್ಲಿ ನಿಮೇಷಾದಿ ರೂಪವಾದ ಕಾಲವಿಭಾಗವೆಲ್ಲವೂ ಪುರುಷನಿಂದಲೇ ಸೃಷ್ಟಿಯಾಗಿ ಹೊರಬಂದಿದೆ -ಎಂಬುದನ್ನು ವಿವರಿಸಿದೆ. ಅವಿದ್ಯಾದೃಷ್ಟಿಯಲ್ಲಿ ಅಥವಾ ವ್ಯವಹಾರದೃಷ್ಟಿಯಲ್ಲಿ ಕಾಲಾದಿಗಳು ನಿತ್ಯವೆಂಬ ಭಾವನೆಯಿಂದ ಪುರಾಣದಲ್ಲಿ ಹಾಗೆ ಹೇಳಿದೆ ಎಂದು ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಸ್ಮೃತಿಗಿಂತಲೂ ಶ್ರುತಿಯು ಪ್ರಬಲವು. ಪ್ರಕೃತದಲ್ಲಿ ನಿಮೇಷಗಳೆಲ್ಲವೂ ಭಗವಂತನಿಂದ ಹುಟ್ಟಿವೆ- ಎಂಬ ವಿಷಯವನ್ನು ನೋಡೋಣ. ಜನಕಮಹಾರಾಜನ ವಂಶದ ಹಿರಿಯಪುರುಷನಾದ ನಿಮಿ ಎಂಬವನೊಬ್ಬನಿದ್ದನು. ಅವನೇ ಮೊದಲನೆಯ ಮಿಥಿಲಾಧಿಪತಿಯು. ದೇವತೆಗಳ ವರಪ್ರಸಾದದಿಂದ ಅವನು ಎಲ್ಲಾ ಮನುಷ್ಯರ ಕಣ್ಣುರೆಪ್ಪೆಗಳಲ್ಲಿಯೂ ನೆಲಸಿದನು. ಆದ್ದರಿಂದಲೇ ಲೋಕದ ಜನರನ್ನು ನಿಮೇಷರೆಂದು ಕರೆಯಲಾಗಿದೆ. ರೆಪ್ಪೆಹೊಡೆಯುವಷ್ಟು ಅಳತೆಯ ಕಾಲವನ್ನು ನಿಮೇಷವೆನ್ನುವರು. ಇದು ಕಾಲಗಣನೆಯಲ್ಲಿ ಸೂಕ್ಷ್ಮವಿಭಾಗವಾಗಿದೆ. ಇದಕ್ಕಿಂತಲೂ ಸೂಕ್ಷ್ಮವಾಗಿರುವ ಕಾಲವಿಭಾಗವೂ ಇದೆ. ಅದನ್ನು ಲವ-ತ್ರುಟಿ ಎನ್ನುವರು. ಇವುಗಳನ್ನು ಅಳೆಯುವ ಕ್ರಮವು ಹೇಗೆಂದರೆ : ಒಂದುನೂರು ತಾವರೆಎಲೆಗಳನ್ನು ಜೋಡಿಸಿಟ್ಟು ಒಂದು ಚೂಪಾದ ಸೂಜಿಯಿಂದ ಚುಚ್ಚಿದರೆ ಒಂದನೆಯ ಎಲೆಯಿಂದ ಎರಡನೆಯ ಎಲೆಗೆ ಸೂಜಿಯು ಪ್ರವೇಶಿಸುವಷ್ಟು ಕಾಲವು ಲವ-ವೆನಿಸುವದು. ಮೂವತ್ತು ಲವಗಳು ಸೇರಿದರೆ ಒಂದು ತ್ರುಟಿಯೆನಿಸುವದು. ಹೀಗೆ **ಸರ್ವಶಃ**- ಎಲ್ಲಾ ರೀತಿಯಿಂದಲೂ ಲವತ್ರುಟ್ಯಾದಿಗಳಿಂದಾರಂಭಿಸಿ ನಿಮೇಷ, ಕಾಷ್ಠಾ, ಕಲಾ, ಮುಹೂರ್ತ, ಅಹೋರಾತ್ರೆಗಳು, ಪಕ್ಷಗಳು, ಮಾಸಗಳು, ಋತುಗಳು, ಸಂವತ್ಸರಗಳು- ಎಲ್ಲವೂ **ವಿದ್ಯುತಃ ಪುರುಷಾತ್**- ಸ್ವಯಂಪ್ರಕಾಶಸ್ವರೂಪನಾದ ಪರಮಪುರುಷನಿಂದಲೇ ಹುಟ್ಟಿಬಂದಿವೆ- ಎಂದು ಅಭಿಪ್ರಾಯ.

ಈಗ ಲವ-ತ್ರುಟಿಗಳಂತೆಯೇ ಕಲಾದಿಗಳ ಪ್ರಮಾಣವನ್ನು ತಿಳಿಯೋಣ. ಹದಿನೆಂಟು ನಿಮೇಷಗಳಿಗೆ ಒಂದು ಕಾಷ್ಠೆಯೆಂದೂ ಮೂವತ್ತು ಕಾಷ್ಠೆಗಳಿಗೆ

ಒಂದು ಕಲೆಯೆಂದೂ ಮೂವತ್ತು ಕಲೆಗಳಿಗೆ ಒಂದು ಕ್ಷಣವೆಂದೂ ಹನ್ನೆರಡು ಕ್ಷಣಗಳಿಗೆ ಒಂದು ಮುಹೂರ್ತವೆಂದೂ ಪ್ರಾಚೀನರು ತಿಳಿಸಿದ್ದಾರೆ. ಇಂಥ ಮುಹೂರ್ತಗಳು ಹದಿನೈದು ಸೇರಿದರೆ ಒಂದು ಹಗಲು, ಹಾಗೆಯೇ ಇನ್ನು ಹದಿನೈದು ಕೂಡಿದರೆ ಒಂದು ರಾತ್ರಿಯಾಗುವದು. ಹಗಲು ರಾತ್ರಿಗಳೆರಡೂ ಕೂಡಿದರೆ ಒಂದು ದಿನವು. ಹದಿನೈದು ದಿನಗಳಿಗೆ ಒಂದು ಪಕ್ಷವು- ಎರಡು ಪಕ್ಷಗಳಿಗೆ ಒಂದು ತಿಂಗಳು ಅಥವಾ ಮಾಸವು. ಹನ್ನೆರಡು ಮಾಸಗಳಿಗೆ ಒಂದು ಸಂವತ್ಸರವು. ಹೀಗೆ ಕಾಲಗಣನೆಯನ್ನು ಪೂರ್ವಿಕರು ಮಾಡಿರುತ್ತಾರೆ. ಈ ಎಲ್ಲಾ ಕಾಲವಿಭಾಗಗಳೂ ಪರಮಪುರುಷನಿಂದಲೇ ಸೃಷ್ಟಿಯಾಗಿವೆ- ಎಂಬಿದು ಇಲ್ಲಿ ಪ್ರಕೃತವಾಗಿದೆ.

ಇಂಥ ಪರಮೇಶ್ವರನು ತಾನೇ ಉಂಟುಮಾಡಿದ ಕಾಲಾನುಗುಣವಾಗಿ- ಎಂದರೆ ಕಾಲವೆಂಬ ಉಪಾಧಿಯನ್ನು ಆಶ್ರಯಿಸಿದವನಾಗಿ ಆಯಾ ಕಾಲಕ್ಕೆ ಉಚಿತವಾದ ರೀತಿಯಿಂದ **ಅಪಃ ಪ್ರದುಘೇ**- ಎಂದರೆ ಜಲೋಪಲಕ್ಷಿತವಾದ ಭೂಮಿಯನ್ನುಂಟುಮಾಡಿ ಕರೆದನು- ಎಂದರೆ ಭೂಮಿಯಲ್ಲಿ ಜೀವಿಸಿರತಕ್ಕ ಪ್ರಾಣಿಗಳಿಗಾಗಿ ಅನ್ನರೂಪವಾಗಿರುವ ಸಸ್ಯಗಳೇ ಮುಂತಾದದ್ದನ್ನು ಉಂಟು ಮಾಡಿದನು- ಎಂದರ್ಥ. ಹಾಗೆಯೇ ಅಂತರಿಕ್ಷವೆಂಬ ಸ್ಥಾನವನ್ನೂ ಸ್ವರ್ಗ ವೆಂಬ ಸ್ಥಾನವನ್ನೂ ನಿರ್ಮಾಣಮಾಡಿ ಎರಡನ್ನೂ ಆಯಾ ಜೀವಿಗಳಿಗೆ ವಾಸಕ್ಕೂ ಅಶನಾದಿಗಳಿಗೂ ಬೇಕಾದ ಪದಾರ್ಥಗಳಿಂದ ತುಂಬಿದನು- ಪರಿ ಪೂರ್ಣಗೊಳಿಸಿದನು- ಎಂದಭಿಪ್ರಾಯ. ಆಕಾಶ-ಎಂದರೆ ಅಂತರಿಕ್ಷನಿವಾಸಿ ಗಳಾದವರಿಗೂ ಸ್ವರ್ಗಲೋಕನಿವಾಸಿಗಳಾದವರಿಗೂ ತಕ್ಕ ಭೋಗ್ಯವಸ್ತುಗಳನ್ನು ಉಂಟುಮಾಡಿ ಲೋಕತ್ರಯಗಳಲ್ಲಿಯೂ ಜೀವರುಗಳು ಬದುಕಿ ಬಾಳುವಂತೆ ವ್ಯವಸ್ಥೆಮಾಡಿದವನಾದನು- ಎಂದು ಅಭಿಪ್ರಾಯ.

**ನೈನಮೂರ್ಧ್ವಂ ನ ತಿರ್ಯಂಚಂ ನ ಮಧ್ಯೇ ಪರಿಜಗ್ರಭತ್ ।**
**ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ ॥೮॥**

ಪರಮೇಶ್ವರನು ಕಾಲ, ಲೋಕಾದಿಗಳೆಲ್ಲವನ್ನೂ ಸೃಷ್ಟಿಮಾಡಿರುತ್ತಾ ನೆಂದು ಹಿಂದಿನ ಮಂತ್ರದಲ್ಲಿ ತಿಳಿಸಿದ್ದಾಯಿತು. ಮತ್ತು ಎಲ್ಲವನ್ನೂ ಅವನೇ ವ್ಯಾಪಿಸಿರುತ್ತಾನೆಂದೂ ಹೇಳಿದಂತಾಯಿತು. ಆದರೆ ಲೋಕತ್ರಯನಿವಾಸಿ ಗಳಾದ ಪ್ರಾಣಿಗಳಿಗೆ ಅದರಲ್ಲಿಯೂ ಬುದ್ಧಿಜೀವಿಗಳಾದ ಮನುಷ್ಯರಿಗಾಗಲಿ, ದೇವತೆಗಳಿಗಾಗಲಿ ಆತನು ಗೊತ್ತಾಗಬೇಡವೆ ? ಯಾರೊಬ್ಬರೂ ಪರಮೇಶ್ವರ ನನ್ನು ಕಂಡೆವು- ಎನ್ನುವವರಿಲ್ಲವಲ್ಲ ? ಏಕೆ ? ಸೃಷ್ಟಿಯನ್ನು ಕಂಡಿರುತ್ತೇವೆ- ಎಂದು ಎಲ್ಲರೂ ಹೇಳುತ್ತಾರೆ. ಸೃಷ್ಟಿಕರ್ತನನ್ನು ಕಂಡಿರುತ್ತೇವೆ-ಎನ್ನುವವರು ತೀರ ವಿರಳರಾಗಿರುತ್ತಾರೆ. ಇದರ ರಹಸ್ಯವೇನು ? ಎಂಬುದನ್ನೀಗ ವಿವರಿಸು

ತ್ತಾರೆ. ನಿಜ ; ಪರಮೇಶ್ವರನನ್ನು ಯಾವನೊಬ್ಬ ಪುರುಷನೂ ಕಂಭದಂತೆ ಎತ್ತರವಾಗಿ ಉದ್ದವಾಗಿ ಮೇಲಕ್ಕೆ ಚಾಚಿರುವಂತೆಯಾಗಲಿ, ಗಿಡಮರಗಳೂ ಪೈರುಗಳೂ ತಮ್ಮ ಫಲಗಳನ್ನು ನೆಲದಕಡೆಗೆ ಚಾಚುವಂತೆ ಕೆಳಮುಖವಾಗಿ ಭಗವಂತನು ಹರಡಿಕೊಂಡಿರುವದನ್ನಾಗಲಿ, ಅಥವಾ ಒಂದು ಮನೆಯ ಒಳಗಡೆ ನಡುವೆ ದೇವದತ್ತನೆಂಬ ಮನುಷ್ಯನಿರುವಂತೆ ಮಧ್ಯದಲ್ಲಿಯಾಗಲಿ ಯಾರೂ ಆತನನ್ನು ಕಂಡಿರುವದಿಲ್ಲ. ಏಕೆಂದರೆ ಮೇಲು, ಕೆಳಗು, ನಡುವೆ- ಎಂಬ ಸ್ಥಾನಗಳಾಗಲಿ, ಆಕಾರಗಳಾಗಲಿ- ಆತನಿಗೆ ಇರುವದಿಲ್ಲ. ಹಾಗೆಯೇ ಜಗತ್ತಿನಲ್ಲಿ ಯಾವನೊಬ್ಬನೂ ಭಗವಂತನನ್ನು ಕುರಿತು "ದೇವ, ನಿನ್ನನ್ನು ನಾನು ತಿಳಿಯಬೇಕಾಗಿದೆಯಾದ್ದರಿಂದ ಇಂಥ ದೇಶದಲ್ಲಿ ಇಂಥ ಆಕಾರದಲ್ಲಿ ಹೀಗೆಹೀಗೆ ಇರುವವನಾಗು" ಎಂದು ಕಟ್ಟುಮಾಡುವಂತಿಲ್ಲ- ಎಂದರೆ ಶಾಸನಮಾಡುವಂತಿಲ್ಲ. ಆದ್ದರಿಂದಲೇ ಅವನ ಹೆಸರುಕೂಡ ಹೆಚ್ಚಿನ ಯಶಸ್ಸನ್ನು ಕೊಂಡಾಡುತ್ತಿದೆ- ಎಂದಭಿಪ್ರಾಯ.

ಉಪನಿಷತ್ತಿನ ಈ ಮಂತ್ರದಲ್ಲಿರುವ 'ತಸ್ಯ ನಾಮ ಮಹದ್ಯಶಃ' ಎಂಬ ವಾಕ್ಯವು ಬಹಳ ಅರ್ಥಗರ್ಭಿತವಾಗಿದೆ. ಸಾಮಾನ್ಯವಾಗಿ ಎಲ್ಲಾ ಉಪನಿಷತ್ತುಗಳಲ್ಲಿಯೂ ಪರಬ್ರಹ್ಮವನ್ನು ನಾಮರೂಪಗಳನ್ನು ಮೀರಿದ್ದೆಂದೂ ಅದು ಮಾತಿಗೂ ಮನಸ್ಸಿಗೂ ನಿಲುಕದೆ ಇರುವ ವಸ್ತುವೆಂದೂ ವರ್ಣಿಸಿರುತ್ತದೆ. ಇದು ಪರಮಾರ್ಥವೂ ಹೌದು. ಆದರೂ ವೇದವು ಮಂದಮಧ್ಯಮಾಧಿಕಾರಿಗಳನ್ನೂ ವರ್ಣಾಶ್ರಮಧರ್ಮಬಾಹಿರರಾಗಿದ್ದರೂ ಸಂಸ್ಕಾರವಶದಿಂದ ಮುಮುಕ್ಷುಗಳಾಗಿದ್ದು ಜ್ಞಾನಪ್ರಾಪ್ತಿಗಾಗಿ ಪ್ರಯತ್ನಮಾಡುವಂಥ ಸಾಧಕರನ್ನೂ ಮನಸ್ಸಿನಲ್ಲಿಟ್ಟುಕೊಂಡು ಆ ಪರಾತ್ಪರವಸ್ತುವಿನಲ್ಲಿ ನಾಮರೂಪಗಳನ್ನು ಅಧ್ಯಾರೋಪಿಸಿ ಭಗವನ್ನಾಮವು ಸ್ವಯಂ ಮಹಿಮಾನ್ವಿತವೆಂದೂ ನಾಮವೇ ಬ್ರಹ್ಮವೆಂದೂ ನಾಮಕೀರ್ತನೆಯೇ ಶ್ರೇಯಸ್ಕರವೂ ಯಶಸ್ಕರವೂ ಆಗಿರುವದೆಂದೂ ತಿಳಿಸುತ್ತಿದೆ. ಮತ್ತು ನಾಮಗ್ರಹಣಮಾತ್ರದಿಂದ ಮಾನವನು ಉದ್ಧಾರವಾಗುತ್ತಾನೆಂದೂ ಕ್ರಮವಾಗಿ ಮೋಕ್ಷವೆಂಬ ಪರಮಪುರುಷಾರ್ಥಕ್ಕೂ ಭಾಗಿಯಾಗುವನೆಂದೂ ಹೇಳುತ್ತಿದೆ. ಇತಿಹಾಸಪುರಾಣಗಳಲ್ಲಿಯಂತೂ ನಾಮ ಮಹಿಮೆಯನ್ನು ತಾತ್ಪರ್ಯದಿಂದಲೇ ತಿಳಿಸಿರುತ್ತದೆ. ಅನೇಕಜನರು ಸಾಧು ಸತ್ಪುರುಷರು, ಮಹಾತ್ಮರು, ಭಕ್ತಶ್ರೇಷ್ಠರುಕೂಡ ನಾಮಮಾಹಾತ್ಮ್ಯವನ್ನು ನಮ್ಮ ದೇಶದಲ್ಲಿ ಪ್ರಚಾರಮಾಡಿರುತ್ತಾರೆ. ಹೀಗೆ ಶ್ರೌತಸ್ಮಾರ್ತಕರ್ಮಗಳು, ವೈದಿಕೋಪಾಸನೆಗಳು, ಜಪ, ತಪ, ಯಾಗಹೋಮಾದಿಗಳಿಂದ ಭಗವತ್ಪ್ರಾಪ್ತಿಯನ್ನು ಬಯಸುವಂತೆಯೇ ಸಾಧಕರಾದವರು ನಾಮಕೀರ್ತನ, ಸ್ಮರಣ, ಜಪ, ಭಜನಾದಿಗಳಿಂದಲೂ ಭಗವಂತನ ಸಾನ್ನಿಧ್ಯವನ್ನು ಪಡೆಯಬಹುದೆಂಬ ಅಭಿ

ಪ್ರಾಯವನ್ನು ಈ ವಾಕ್ಯವು ತಿಳಿಸುತ್ತದೆ. ನಾಮಕೀರ್ತನೆಯೂ ವೈದಿಕೋಪ ದೇಶವೇ- ಎಂಬುದನ್ನು ಈ ಮಾತು ಸಮರ್ಥಿಸುತ್ತದೆ. ಆದ್ದರಿಂದ ಕರ್ಮಠ ರಾದವರು ನಾಮಕೀರ್ತನ, ಭಜನಾದಿಗಳಿಂದಲೂ ಮೋಕ್ಷಪ್ರಾಪ್ತಿಯ ಅವಕಾಶ ವಿದೆಯೆಂದು ತಿಳಿದು ಗೌರವಿಸಬೇಕು. ಹಾಗೆಯೇ ಕೀರ್ತನಭಜನಾದಿಗಳಲ್ಲಿ ಆಸಕ್ತರಾದವರು ವೇದೋಕ್ತಕರ್ಮಗಳ ಅಂತಸ್ತನ್ನು ಅರಿತು ಅವುಗಳ ಅನು ಷ್ಠಾನದಲ್ಲಿಯೂ ಆದರವನ್ನು ತೋರಿಸಬೇಕು. ಆಗ ನಾವು ವೇದಮಾತೆಯ ಹೃದಯಾಂತರ್ಗತವಾದ ಪೂರ್ಣಾರ್ಥವನ್ನು ಬಲ್ಲವರಾಗುವೆವು.

**ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ**
**ಕಶ್ಚನೈನಮ್ । ಹೃದಾ ಮನೀಷಾ ಮನಸಾಭಿಕ್ಲೃಪ್ತೋ**
**ಯ ಏನಂ ವಿದುರಮೃತಾಸ್ತೇ ಭವಂತಿ ।೯॥**

ಈ ಮಂತ್ರವು ಕಠೋಪನಿಷತ್ತಿನಲ್ಲಿಯೂ ಇದೆ. ಹಿಂದಿನ ಮಂತ್ರದಲ್ಲಿ ತಿಳಿಸಿರುವಂತೆ ಪರಮಾತ್ಮನು ಯಾವ ಉಪಾಧಿಯೂ ಇಲ್ಲದವನಾದ್ದರಿಂದ ಆವನನ್ನು ಕಾಣುವದೇ ಸಾಧ್ಯವಿಲ್ಲವೆಂದಾಗುವದಾದರೆ, ಹಾಗಿಲ್ಲ, ಉಪಾಯಾಂ ತರದಿಂದ ಕಂಡುಕೊಳ್ಳಬಹುದು- ಎಂದು ಈ ಮಂತ್ರವು ತಿಳಿಸುತ್ತದೆ. ಪ್ರತ್ಯ ಗಾತ್ಮನಾಗಿರುವ ಈತನ ರೂಪವು ಕಣ್ಣುಗಳಿಗೆ ಗೋಚರವಾಗುವ ಸ್ಥಿತಿಯಲ್ಲಿರು ವದಿಲ್ಲ. ಹಾಗೆಯೇ ಕಣ್ಣಿನ ಜೊತೆಗೆ ಉಳಿದ ಯಾವ ಇಂದ್ರಿಯಗಳೂ ಈತ ನನ್ನು ಗ್ರಹಿಸಲಾರವು. ಎಂಥ ಸೂಕ್ಷ್ಮದರ್ಶನವುಳ್ಳವನಾಗಲಿ, ಯಂತ್ರಗಳನ್ನು ಬಳಸಿಯಾದರೂ ಸೂಕ್ಷ್ಮವಸ್ತುವನ್ನು ಕಂಡುಕೊಳ್ಳುವೆನು- ಎಂಬ ಜಾಣನೇ ಆಗಲಿ- ಯಾರಿಗೂ ಈ ಪ್ರತ್ಯಗಾತ್ಮನನ್ನು ಕಾಣುವದು ಸಾಧ್ಯವಾಗಲಾರದು. ಆದರೆ ಯಾವನು ಹೃದಯದಲ್ಲಿರುವ ಬುದ್ಧಿಯಿಂದ- ಎಂದರೆ ಬುದ್ಧಿಯನ್ನು ಹೊರಮುಖವಾಗಿ ತರ್ಕಪ್ರಧಾನವಾಗಿ ಬಳಸದೆ ಯೋಗಾದಿಗಳಿಂದ ಅಂತ ರ್ಮುಖವಾಗಿ ಮಾಡಿಕೊಂಡು ಪ್ರತ್ಯಗ್‌ದೃಷ್ಟಿಯುಳ್ಳವನಾಗಿ ಮತ್ತು ಸಂಕಲ್ಪ ವಿಕಲ್ಪಗಳನ್ನು ಹೊಂದುವ ವೃತ್ತಿರೂಪವಾದ ಮನಸ್ಸನ್ನೂ ನಿಯಮನಮಾಡು ವಂಥ ದೃಢವಾದ ಸ್ಥಿರವಾದ ಬುದ್ಧಿಯಿಂದ ಕೂಡಿದವನಾಗಿ ಪ್ರಯತ್ನಮಾಡು ವನೋ ಆವನು ತನ್ನ ಸ್ವರೂಪಭೂತನೇ ಆಗಿರುವ ಈ ಪರಮಾತ್ಮನನ್ನು ತ್ರಿಪುಟಿರಹಿತವಾಗಿ ಕೇವಲಾನುಭವರೂಪವಾಗಿ ಕಂಡುಕೊಳ್ಳುವನು. ಹೀಗೆ ವಿಚಾರಮಾಡಿ ತಿಳಿದ ಸ್ಥಿತಪ್ರಜ್ಞರೆಲ್ಲರೂ ಅಮೃತರಾಗಿಬಿಡುವರು- ಎಂದು ಅಭಿಪ್ರಾಯ.

**ಅದ್ಭ್ಯಃ ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ ॥೧೦॥**

ಬ್ರಹ್ಮಪ್ರತಿಪಾದಕಮಂತ್ರಗಳುಳ್ಳ ಈ ಅನುವಾಕದಲ್ಲಿ ಇಲ್ಲಿ ಪ್ರತೀಕ ಗ್ರಹಣದಿಂದ ಕೆಲವು ಮಂತ್ರಗಳನ್ನು ಸೂಚಿಸಿದೆ. 'ಅದ್ಭ್ಯಃ ಸಂಭೂತಃ'

ಎಂದು ಆರಂಭವಾಗಿ 'ಸರ್ವಂ ಮನಿಷಾಣ' ಎಂಬಲ್ಲಿಯವರೆಗಿನ ಒಂದು ಅನುವಾಕವನ್ನೂ 'ಹಿರಣ್ಯಗರ್ಭಃ ಸಮವರ್ತತಾಗ್ರೇ' ಎಂದು ಆರಂಭವಾಗಿ 'ಕಸ್ಮೈ ದೇವಾಯ ಹವಿಷಾ ವಿಧೇಮ' ಎಂದು ಪೂರೈಸುವ ಎಂಟು ಮಂತ್ರಗಳನ್ನೂ ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು– ಹಾಗೂ ಅಧ್ಯಯನಮಾಡಬೇಕು– ಎಂದಭಿಪ್ರಾಯ. ಈ ಮಂತ್ರಗಳೆಲ್ಲವೂ ಕ್ರಮವಾಗಿ ತೈತ್ತಿರೀಯಾರಣ್ಯಕದ ಮೂರನೆಯ ಪ್ರಶ್ನದಲ್ಲಿಯೂ ತೈತ್ತಿರೀಯಸಂಹಿತೆಯ ನಾಲ್ಕನೆಯ ಕಾಂಡದ ಪ್ರಥಮಪ್ರಪಾಠಕದಲ್ಲಿಯೂ ಇವೆ. ಈಗ ಇವುಗಳ ಅಭಿಪ್ರಾಯವನ್ನು ತಿಳಿಯೋಣ.

**ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ । ವಿಶ್ವಕರ್ಮಣಃ**
**ಸಮವರ್ತತಾಧಿ । ತಸ್ಯ ತ್ವಷ್ಟಾ ವಿದಧದ್ ರೂಪಮೇತಿ ।**
**ತತ್ಪುರುಷಸ್ಯ ವಿಶ್ವಮಾಜಾನಮಗ್ರೇ ॥**

ನೀರು, ಭೂಮಿ, ರಸ– ಎಂದರೆ ಹಾಲಿನ ಜಿಡ್ಡಾದ ತುಪ್ಪವೆಂದು ಅರ್ಥಮಾಡಿ ತುಪ್ಪವು ತೇಜೋದ್ರವ್ಯವೆಂದು ವೈದಿಕಪ್ರಸಿದ್ಧಿಯಿರುವದರಿಂದ ತೇಜಸ್ಸೆಂದು ಪರಿಗಣಿಸಿದರೆ ಪೃಥಿವ್ಯಾದಿಭೂತತ್ರಯಗಳಾಗುವವು. ಈ ಮೂರು ಮಹಾಭೂತಗಳನ್ನೂ ಉಪಲಕ್ಷಣವೆಂದು ಭಾವಿಸಿದರೆ ವಾಯ್ವಾಕಾಶಗಳೂ ಗೃಹೀತವಾಗುತ್ತವೆ. ವಿಶ್ವಕರ್ಮನೆನಿಸಿರುವ ಸೃಷ್ಟಿಕರ್ತನಿಂದ ಬ್ರಹ್ಮಾಂಡಸೃಷ್ಟಿಯು ಈ ಪಂಚಮಹಾಭೂತಗಳ ದ್ವಾರದಿಂದ ಹೊರಬಂದಿತು. ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲಾ ಭೂತಗಳೂ ಎಂದರೆ ದೇವತೆಗಳು, ತಿರ್ಯಕ್ ಪ್ರಾಣಿಗಳು, ಮನುಷ್ಯರು– ಆದಿತ್ಯಾದಿಗ್ರಹಗಳು– ಇತ್ಯಾದಿ– ಎಲ್ಲಾ ಸೃಷ್ಟಿಯೂ ವಿಶ್ವಕರ್ಮನ ಕೃತಿಯೇ ಆಗಿದೆ. ಇವರಲ್ಲಿ ದೇದೀಪ್ಯನಾಗಿ ಬೆಳಗುತ್ತಿರುವ ತ್ವಷ್ಟನು ಎಂದರೆ ಸೂರ್ಯನು ಪರಮಾತ್ಮನ ವಿಭೂತಿರೂಪನೇ ಆಗಿದ್ದು 'ಏತಿ' ಎಂದರೆ ಉದಯಾಚಲಪರ್ವತವನ್ನೇರುವನು– ಎಂದರ್ಥ. ಇಂಥ ಸವಿತೃದೇವನು ತನ್ನ ಕಿರಣಗಳಿಂದ ಈ ಪ್ರಸಿದ್ಧವಾದ ಸೃಷ್ಟಿಯನ್ನೆಲ್ಲ ವಿಶ್ವವನ್ನೆಲ್ಲ ವ್ಯಾಪಿಸಿಕೊಂಡಿರುವನು. ಇವನೇ ಸಮಸ್ತಜಗತ್ತಿನ ಆತ್ಮನು. ಏಕೆಂದರೆ ಸೂರ್ಯಾಂತರ್ಗತನಾದ ಭಗವಂತನೇ ಅಲ್ಲವೆ ಸರ್ವಾಂತರಾತ್ಮನೆನಿಸಿರುವನು? ಇಂಥ ವಿಶ್ವಕರ್ಮನೂ ಜಗತ್ಸಾಕ್ಷಿಯೂ, ನಿಖಿಲಜಗದ್ವ್ಯಾಪಕನೂ ತೇಜೋಮಯನೂ ಸರ್ವಾತ್ಮನೂ ಆದ ಪುರುಷನನ್ನು ನಾನು ತಿಳಿದವನಾಗಿರುತ್ತೇನೆ– ಎಂದು ಮುಂದಿನ ಮಂತ್ರದೊಡನೆ ಅನ್ವಯಿಸಿಕೊಳ್ಳಬೇಕು.

**ವೇದಾಹಮೇತಂ ಪುರುಷಂ ಮಹಾಂತಮ್ । ಆದಿತ್ಯವರ್ಣಂ ತಮಸಃ**
**ಪರಸ್ತಾತ್ । ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ**
**ಪಂಥಾ ವಿದ್ಯತೇಽಯನಾಯ ॥**

ಈ ಮಂತ್ರವನ್ನು ಹಿಂದಿನ ಮಂತ್ರದೊಡನೆ ಅನ್ವಯಿಸಿ ಅಭಿಪ್ರಾಯ ಮಾಡಿಕೊಳ್ಳಬೇಕು. ಒಬ್ಬಾನೊಬ್ಬ ಸೂರ್ಯೋಪಾಸಕನ ಅಭಿಪ್ರಾಯವು ಹೀಗಿದೆ: ಆಕಾಶಮಂಡಲದಲ್ಲಿ ಕಂಡುಬರುತ್ತಿರುವ ಈ ಆದಿತ್ಯವರ್ಣನಾದ ಹಾಗೂ ಕತ್ತಲೆಯ ಆಚೆಗೆ ಇರುವ ಮಹಾಂತನಾದ ಈ ಪುರುಷನನ್ನು ನಾನು ಬಲ್ಲೆನು. ಇವನೇ ನನ್ನ ಆತ್ಮನು, ಹಾಗೂ ಎಲ್ಲದರ ಆತ್ಮನೂ ಆಗಿರುವನು. ಸೂರ್ಯನಲ್ಲಿ ಕಾಣಿಸಿಕೊಳ್ಳುವಂತೆಯೇ ನನ್ನಲ್ಲಿಯೂ ಕಾಣಿಸಿಕೊಂಡಿರುವನು. ನಾನಾಗಿರುವ ದೇಹೋಪಾಧಿಯನ್ನೂ ಸೂರ್ಯನೆನಿಸಿ ಬೆಳಗುವ ಮಂಡಲೋಪಾಧಿಯನ್ನೂ ಕಳಚಿದರೆ ಅವನೇ ನಾನು, ನಾನೇ ಅವನಾಗಿರುವೆನು. ಅಥವಾ ನಾನು- ಅವನು ಎಲ್ಲವೂ ಮುಳುಗಿದ ಆತ್ಮನಾಗಿರುವದು. ಇಂಥ ಪರಬ್ರಹ್ಮಸ್ವರೂಪವನ್ನು ಹೀಗೆ ವಿಚಾರಮಾಡಿ ಶಾಸ್ತ್ರಾಚಾರ್ಯೋಪದೇಶಗಳಿಂದ ಪ್ರತ್ಯಗಾತ್ಮನಾಗಿ ಅರಿತುಕೊಂಡವನು ಇಲ್ಲಿಯೇ ಅಮೃತನಾಗಿಬಿಡುವನು. ಇದೇ ಮುಕ್ತಿಯು. ಹೀಗೆ ಅರಿತುಕೊಳ್ಳುವದನ್ನು ಬಿಟ್ಟರೆ ಮುಕ್ತಿಗೆ ಬೇರೆಯ ಹಾದಿಯಿರುವದಿಲ್ಲ- ಎಂಬಿದು ಉಪಾಸಕನ ಅಭಿಪ್ರಾಯವು. ಇಂಥ ವಸ್ತುತತ್ತ್ವಚಿಂತಕನು ಪೂರ್ಣಜ್ಞಾನಿಯೇ ಆಗಿರುವನೆಂಬುದರಲ್ಲಿ ಸಂಶಯವಿಲ್ಲ. ಇದರಿಂದ ಮುಕ್ತಿಗೆ ಜ್ಞಾನವೊಂದೇ ಸಾಧನವೆಂದೂ ಸಿದ್ಧವಾಗುತ್ತದೆ.

**ಪ್ರಜಾಪತಿಶ್ಚರತಿ ಗರ್ಭೇ ಅಂತಃ । ಅಜಾಯಮಾನೋ**
**ಬಹುಧಾ ವಿಜಾಯತೇ । ತಸ್ಯ ಧೀರಾಃ ಪರಿಜಾನಂತಿ ಯೋನಿಮ್।**
**ಮರೀಚೀನಾಂ ಪದಮಿಚ್ಛಂತಿ ವೇಧಸಃ ॥**

ಈ ಮಂತ್ರದಲ್ಲಿ ಪರಮಾತ್ಮನ ಮಹಿಮೆಯನ್ನು ಹೇಳಿದೆ. ಸರ್ವಾತ್ಮನಾದ ಭಗವಂತನೇ ಪ್ರಜೆಗಳಿಗೆಲ್ಲ ಪತಿಯಾಗಿರುವದರಿಂದ ಪ್ರಜಾಪತಿಯೆನಿಸಿರುವೆನು. ಆ ಪ್ರಜಾಪತಿಯು ಬ್ರಹ್ಮಾಂಡಗರ್ಭದಲ್ಲೆಲ್ಲ ಒಳಹೊಕ್ಕು ಓಡಾಡುತ್ತಿರುವನು. ಹೇಗೆ ಗಾಳಿಯು ಆಕಾಶವನ್ನೆಲ್ಲ ವ್ಯಾಪಿಸಿರುವದೋ ಹಾಗೆ ಎಲ್ಲಾ ಪ್ರಾಣಿಗಳೂ ಆ ಪ್ರಜಾಪತಿಯ ಗರ್ಭದಲ್ಲೇ ಅಡಗಿರುವವು- ಎಂದೂ ಅರ್ಥಮಾಡಬಹುದು. ಹೀಗೆ ನಾನಾಜೀವರುಗಳಾಗಿ ಹುಟ್ಟಿ ತೋರಿಕೊಂಡಿದ್ದರೂ ಆ ಪರಮಾತ್ಮನು ಸ್ವತಃ ಅಜನು- ಎಂದರೆ ಜನ್ಮವಿಲ್ಲದವನು. ಆದರೂ ನಾನಾವಿಧವಾಗಿ ಹುಟ್ಟಿದಂತೆ ತೋರುತ್ತಿರುವನು. ಭಗವಂತನಿಗೂ ಹುಟ್ಟು ಮುಂತಾದ ವಿಕಾರಗಳು ಇರಲಿ? ಎಂದು ಶಂಕಿಸಬಾರದು. ಹುಟ್ಟಿದ ವಸ್ತುವು ನಾಶವಾಗಲೇಬೇಕಾದ್ದರಿಂದ ಭಗವಂತನೂ ಅನಿತ್ಯನೆಂದಾಗಿಬಿಡುವದು. ಆಗ ಆತ್ಮನು ನಿತ್ಯನೆಂದೂ ಅವಿಕಾರಿಯೆಂದೂ ಹೇಳುವ ಶ್ರುತಿಗಳಿಗೆ ವಿರೋಧವಾಗುವದು. ಮತ್ತು ಜನ್ಮಮರಣಗಳಿಗೆ ಸಾಕ್ಷಿಯಾದ ಆತ್ಮನಿಗೆ ಜನ್ಮವುಂಟೆಂಬುದು ಅನುಭವವಿರುದ್ಧವೂ ಆಗುವದು. ಅದ್ದರಿಂದ ಈ ಶ್ರುತಿಯಲ್ಲಿರುವ 'ಅಜಾಯಮಾನಃ' ಎಂಬುದು

ಯಥಾರ್ಥನಿರ್ದೇಶವು. 'ಬಹುಧಾ ವಿಜಾಯತೇ' ಎಂಬಿದು ಅನುವಾದವು- ಎಂದರೆ ಲೋಕದೃಷ್ಟಿಯನ್ನು ಅನುಸರಿಸಿ ಹೇಳಿದ್ದು ಎಂದು ತಿಳಿಯಬೇಕು. ಎರಡೂ ವಿರುದ್ಧಧರ್ಮಗಳನ್ನು ಕೂಡಿಸಿ ಹೀಗೆ ಹೇಳುವದು ಸರಿಯೆ ? ಎಂದರೆ 'ವಿಜಾಯತೇ ಇವ' (ಹುಟ್ಟಿದವನಂತೆ ತೋರುತ್ತಾನೆ) ಮಾಯೆಯಿಂದ ಹುಟ್ಟು ತ್ತಾನೆ- ಎಂದು ಹೊಂದಾವಣೆಮಾಡಿಕೊಳ್ಳಬೇಕೆಂದು ಸಂಪ್ರದಾಯವನ್ನು ಬಲ್ಲವರು ತಿಳಿಸುತ್ತಾರೆ.

ಇಂಥ ಪರಮಾತ್ಮನು ನಮಗೆಲ್ಲ ಅನುಗ್ರಹಿಸುವದಕ್ಕಾಗಿ ಸೂರ್ಯನಾಗಿ ಕಂಡುಬರುತ್ತಿರುವನಷ್ಟೆ ! ಈ ಸೂರ್ಯರೂಪನಾದ ದೇವತೆಯನ್ನು ಮೊದಲು ವಿಚಾರಮಾಡಿ ಕಂಡುಕೊಂಡ ಪ್ರಾಜ್ಞರುಗಳು ಮರೀಚಿಗಳ- ಎಂದರೆ ವೇದಗಳ ಪರಮಸ್ಥಾನವಾದ ನಾರಾಯಣನನ್ನು ಸೇಲಿಚ್ಛಿಸುವವರಾಗಿರುವರು. ಅವರಿಗೆ ಸೂರ್ಯನಿಗೂ ಕಾರಣನಾದ ಭಗವಂತನ ಅರಿವುಂಟಾಗಿರುವದು. ಆದ್ದರಿಂದ ಅವರು ಧೀರರೆನಿಸಿರುವರು. ತಮ್ಮ ಅಂತರ್ಮುಖವಾದ ಧೀಶಕ್ತಿಯಿಂದ ಸರ್ವಾತ್ಮನಾದ ನಾರಾಯಣನನ್ನೇ ಬಳಿಸಾರಿ ಕೃತಕೃತ್ಯರಾಗಿಬಿಡುವರು- ಎಂದರ್ಥ.

**ಯೋ ದೇವೇಭ್ಯ ಆತಪತಿ । ಯೋ ದೇವಾನಾಂ ಪುರೋಹಿತಃ । ಪೂರ್ವೋ ಯೋ ದೇವೇಭ್ಯೋ ಜಾತಃ । ನಮೋ ರುಚಾಯ ಬ್ರಾಹ್ಮಯೇ ॥**

ಈ ಮಂತ್ರದಲ್ಲಿ ಮತ್ತೆ ಸೂರ್ಯರೂಪನಾದ ಭಗವಂತನನ್ನು ಸ್ತುತಿಸ ಲಾಗಿದೆ. ಯಾವ ಸೂರ್ಯದೇವನು ದೇವತೆಗಳಿಗಾಗಿ ಪ್ರಕಾಶಿಸುವನೋ- ಎಂದರೆ ದೇವತೆಗಳನ್ನು ಉದ್ದೇಶಿಸಿ ಕರ್ಮಾನುಷ್ಠಾನವನ್ನು ಮಾಡುವ ಜನರಿಗೆ ಹಗಲು- ರಾತ್ರಿಗಳನ್ನು ಉಂಟುಮಾಡುತ್ತಾ ಕಾಲರೂಪದಿಂದ ಅನುಗ್ರಹಿಸು ತ್ತಿರುವನೋ ಹಾಗೂ ಯಾವ ಆದಿತ್ಯನು ದೇವತೆಗಳಲ್ಲಿ ಮುಂದಾಳಾಗಿ (ಪುರೋಹಿತನಾಗಿ)ದ್ದುಕೊಂಡು ಎಲ್ಲಾ ದೇವತೆಗಳಿಗಿಂತಲೂ ಮೊದಲು ಜನಿಸಿ ದವನಾದನೋ ಅವನ ಬ್ರಾಹ್ಮವಾದ ತೇಜಸ್ಸಿಗೆ ನಮಸ್ಕಾರಗಳು- ಎಂದು ಅಭಿಪ್ರಾಯ. ಸೂರ್ಯಾಂತರ್ಗತವಾದ ತೇಜಸ್ಸೆಂಬುದು ಬ್ರಹ್ಮವೇ. ಏಕೆಂದರೆ ಅದರ ಬೆಳಕಿನಿಂದಲೇ ಉಳಿದೆಲ್ಲವೂ ಬೆಳಗುತ್ತಿರುವದು. ಆದ್ದರಿಂದ ಸೂರ್ಯ ನನ್ನು ಬ್ರಾಹ್ಮತೇಜಸ್ಸಿನ ಗನಿಯೆನ್ನಬಹುದು. ಯಾರು ಬ್ರಹ್ಮತೇಜೋ ಮಯರಾಗಿ ಬಾಳಲಿಚ್ಛಿಸುವರೋ ಅಂಥವರು ಮೊದಲು ಸೂರ್ಯನನ್ನು ಆರಾಧಿಸಬೇಕು. ಸಂಧ್ಯಾವಂದನೆಯ ಪರಮೋದ್ದೇಶವೇ ಇದಾಗಿರುವದು.

ಸೂರ್ಯೋಪಾಸನೆಯೇ ಸಂಧ್ಯಾವಂದನೆಯ ಸಾರವಾಗಿರುತ್ತದೆ. ಇಂಥ ಸೂರ್ಯಾತ್ಮಕವಾದ ಬ್ರಾಹ್ಮತೇಜಸ್ಸಿಗೆ ವಂದನೆಗಳು– ಎಂದಭಿಪ್ರಾಯ.

**ರುಚಂ ಬ್ರಾಹ್ಮಂ ಜನಯಂತಃ । ದೇವಾ ಅಗ್ರೇ ತದಬ್ರುವನ್ ।**
**ಯಸ್ತ್ವೈವಂ ಬ್ರಾಹ್ಮಣೋ ವಿದ್ಯಾತ್ । ತಸ್ಯ ದೇವಾ ಅಸನ್ ವಶೇ ॥**

ಬ್ರಾಹ್ಮತೇಜಸ್ಸು– ಎಂಬಿದು ತಪಸ್ಸಿನಿಂದಲೂ ವಿದ್ಯೆಯಿಂದಲೂ ಸಂಪಾದಿಸತಕ್ಕದ್ದಾಗಿದೆ. ಇದಕ್ಕೆ ದೇವತೆಗಳ ಸಹಕಾರವೂ ಬೇಕಾಗುತ್ತದೆ. ಶ್ರದ್ಧೆ, ಮುಮುಕ್ಷುತ್ವಾದಿಗುಣಗಳನ್ನು ಅಧಿಕಾರಿಯಾದ ಸಾಧಕನಿಗೆ ದೇವತೆಗಳೇ ಅನುಗ್ರಹಿಸುತ್ತಾರೆ. ಅಂಥ ಸಾಧಕನು ಬ್ರಾಹ್ಮತೇಜಸ್ಸನ್ನು ಗಳಿಸಿಕೊಳ್ಳುತ್ತಾನೆ. ಅನಂತರ ಅದರ ಪ್ರಭಾವದಿಂದ ದೇವತೆಗಳನ್ನೆಲ್ಲ ತನ್ನ ವಶದಲ್ಲಿರಿಸಿಕೊಳ್ಳುತ್ತಾನೆ. ನಿಜವೇನೆಂದರೆ ಇವನು ಎಲ್ಲ ದೇವತೆಗಳ ಆತ್ಮನಾಗಿಬಿಡುವನು. ಆಗ ದೇವತೆಗಳೆಂಬವರು ಇವನಿಗಿಂತ ಅನನ್ಯರಾಗಿಬಿಡುವದರಿಂದ ಇವನ ವಶದಲ್ಲಿದ್ದಂತೆ ಆಗುವರು. ಹೀಗೆ ಯಾವನು ತಿಳಿವಳಿಕೆಯಿಂದ ಪರಬ್ರಹ್ಮರೂಪವನ್ನು ಹೊಂದುವನೋ ಅವನೇ ಬ್ರಹ್ಮವಿದನು. ಇಂಥ ಬ್ರಹ್ಮನಿಷ್ಠನನ್ನು ಇಲ್ಲಿ ಸ್ತುತಿಸಿದೆ– ಎಂದು ತಿಳಿಯಬೇಕು.

**ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋ ರಾತ್ರೇ ಪಾರ್ಶ್ವೇ ।**
**ನಕ್ಷತ್ರಾಣಿ ರೂಪಮ್ । ಅಶ್ವಿನೌ ವ್ಯಾತ್ತಮ್ । ಇಷ್ಟಂ**
**ಮನಿಷಾಣ । ಅಮುಂ ಮನಿಷಾಣ । ಸರ್ವಂ ಮನಿಷಾಣ ॥**

ಈ ಮಂತ್ರದಲ್ಲಿ ಸೂರ್ಯಾಂತರ್ಗತನಾದ ನಾರಾಯಣನನ್ನು ವಿಶೇಷವಾಗಿ ಸ್ತುತಿಸಲಾಗಿದೆ. ವಿರಾಡ್ರೂಪನಾಗಿಯೂ ತೋರಿಕೊಂಡಿರುವ ನಾರಾಯಣನಿಗೆ ಜಗತ್ತೆಲ್ಲವೂ ಶರೀರವಾಗಿದೆ. ಹ್ರೀ ಎಂಬವಳೂ ಲಕ್ಷ್ಮಿಯೂ ಪತ್ನಿಯರಾಗಿರುವರು. ಹಗಲುರಾತ್ರಿಗಳೆಂಬಿವೇ ಎಡಬಲಪಕ್ಕಗಳು. ನಕ್ಷತ್ರಗಳಂತೆ ಆತನ ರೂಪವು ಸುಂದರವಾಗಿರುವದು. ಮುಖವು ಅಶ್ವಿನೀದೇವತೆಗಳಂತೆ ವಿಶಾಲವೂ ರಮಣೀಯವೂ ಆಗಿರುವದು. ಇಂಥ ನಾರಾಯಣನನ್ನು ಕುರಿತು ಭಕ್ತನು ತನ್ನ ಇಷ್ಟಾರ್ಥಗಳನ್ನು ಬೇಡಿಕೊಳ್ಳುತ್ತಿದ್ದಾನೆ. "ಎಲೈ ಭಗವಂತನೆ, ನನಗೆ ಇಷ್ಟವಾದದ್ದನ್ನೆಲ್ಲ ದಯಪಾಲಿಸುವವನಾಗು. ಪರಲೋಕ (ಸುಖ)ವನ್ನು ಕೊಡುವವನಾಗು. ಮತ್ತು ಸರ್ವವನ್ನೂ ಎಂದರೆ ಸರ್ವವಿಧವಾದ ಸುಖ-ಶಾಂತಿ-ಸ್ವಾತಂತ್ರ್ಯಗಳನ್ನೂ ಕೊಟ್ಟು ಕಾಪಾಡುವವನಾಗು." ಈ ರೀತಿಯಲ್ಲಿ ಈ ಮಂತ್ರಗಳಲ್ಲಿ ಜ್ಞಾನೋಪಾಸನಾದಿಸಾಧನಗಳಿಂದ ಮುಕ್ತಿಪರ್ಯಂತವಾದ ಪುರುಷಾರ್ಥಗಳನ್ನು ಭಗವಂತನಲ್ಲಿ ಕೇಳಿಕೊಳ್ಳುವಂತೆ ತಿಳಿಸಲಾಗಿದೆ.

# ಅಧ್ಯಾತ್ಮಪ್ರಕಾಶಕಾರ್ಯಾಲಯ, ಬೆಂಗಳೂರುಶಾಖೆ,

ನಂ. 68, ೨ನೆಯ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-560028

( ಸಂಸ್ಥಾಪಕರು : ಪ. ಪ. ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು )

**1986ನೆಯ ನವೆಂಬರ್ ಮಾಹೆಯಲ್ಲಿ ನಡೆಯುವ**

**ವಿಶೇಷ ಉಪನ್ಯಾಸಗಳು : ಶನಿವಾರ ಸಂಜೆ ಘಂ. 4 ರಿಂದ 5**
**ಭಾನುವಾರ ಸಂಜೆ ಘಂ. 5ರಿಂದ 6**

1. 1-11-86ನೆಯ ಶನಿವಾರ

ಶ್ರೀ ಹೆಚ್.ಆರ್. ಶ್ರೀಧರನ್ B.Sc., "ಆಚಾರ್ಯಾವತಾರಮಾಹಾತ್ಮ್ಯಮ್"

2. 2-11-86ನೆಯ ಭಾನುವಾರ

ವೇದವಿದ್ಯಾಭೂಷಣ ಕೆ. ಜಿ ಸುಬ್ರಾಯಶರ್ಮಾ, M.A.,
"ವಾಮನಾವತಾರವೈಶಿಷ್ಟ್ಯಮ್"

3. 8-11-86ನೆಯ ಶನಿವಾರ

ಪ್ರೊ. ಬಿ. ಭೀಮಸೇನರಾವ್, M.Sc.,
"ವೇದಾಂತದರ್ಶನಕ್ಕೆ ಕಾಳಿದಾಸನ ಕೊಡುಗೆ"

4. 9-11-86ನೆಯ ಭಾನುವಾರ

ಶ್ರೀ ಎ. ಕೃಷ್ಣಮೂರ್ತಿಗಳು (S.B.M. Retd.)
"ಭಾರತದ ಸಂಪತ್ತು ಉಪನಿಷತ್ತುಗಳು"

5. 15-11-1986ನೆಯ ಶನಿವಾರ

ವಿದುಷಿ ಸ್ವರ್ಣಾಂಬಾ ಮತ್ತು ನಂಜಾಂಬಾ "ಭಕ್ತಿಗೀತೆಗಳು"

6. 16-11-86ನೆಯ ಭಾನುವಾರ

ಶ್ರೀ ಎಂ. ವಿ. ರಾಮಚಂದ್ರ, B.E. (S.E. Retd.)
"ಖಗೋಳಶಾಸ್ತ್ರ ಮತ್ತು ವೇದಾಂತ"

7. 22-11-86ನೆಯ ಶನಿವಾರ

ವೇ|| ಬ್ರ|| ಶ್ರೀ|| ಎ.ಎನ್. ಗಂಗಾಧರಶಾಸ್ತ್ರಿಗಳವರು,
"ಪುರುಷೋತ್ತಮ ಶ್ರೀರಾಮಚಂದ್ರ"

8. 23-11-86ನೆಯ ಭಾನುವಾರ

ಓಂ ಗಣೇಶ (ರಾಜಗೋಪಾಲ ಅಯ್ಯರ್) "ಶ್ರೀ ಗಣೇಶನ ಸ್ವರೂಪ"

9. 29-11-86ನೆಯ ಶನಿವಾರ

ಭಜನಪರಾಯಣ ಎಲ್.ಎನ್ ರಂಗನಾಥ್ ಮತ್ತು ಪಾರ್ಟಿ "ಭಜನಸಂಗೀತ"

10. 30-11-86ನೆಯ ಭಾನುವಾರ

ಅಧ್ಯಾತ್ಮವಿದ್ಯಾಪ್ರವೀಣ ಕೆ.ಜಿ. ಸುಬ್ರಾಯಶರ್ಮಾ, M.A.,
"ಕರ್ತೃತಂತ್ರಧ್ಯಾನ ಹಾಗೂ ವಸ್ತುತಂತ್ರಜ್ಞಾನ"

**ತಮಗೆಲ್ಲರಿಗೂ ಆದರದ ಸುಸ್ವಾಗತ.**

ಬೆಂಗಳೂರು-560028
ತಾ|| 1-11-1986.

ಕೆ. ಜಿ. ಸುಬ್ರಾಯಶರ್ಮಾ,
ಕಾರ್ಯದರ್ಶೀ.

# ADHYATMA Prakasha

Regd. No.
KRNI-5

Registered with the Registrar of News-papers for India under No. R. N. 13244/57


## ಕೇಳಿರಿ

ಪ್ರಾಪಂಚಿಕವ್ಯವಹಾರದಲ್ಲಿ ಮುಳುಗಿರುವ ಜನರಿಗೆ ನಿದ್ರೆಯೆಂಬುದು ಒಂದು ವ್ಯರ್ಥವಾದ, ಕಾಲವನ್ನು ನುಂಗುವ ಸ್ಥಿತಿಯೆಂದು ಕಂಡುಬರುವದು. ಆದರೆ ಪ್ರತಿಯೊಬ್ಬ ಜೀವನೂ ಆ ಸಮಯದಲ್ಲಿ ಪರಬ್ರಹ್ಮದಲ್ಲಿ ಒಂದಾಗಿರುವನು. ಆದರೂ ಅದರೂ ಅದನ್ನರಿಯದೆ- ನಿಧಿಶಾಸ್ತ್ರದ ತಿಳಿವಳಿಕೆಯಿಲ್ಲದವನು ಭೂಗರ್ಭದಲ್ಲಿರುವ ನಿಧಿಯಮೇಲೆಯೇ ಜೀವಿಸಿದ್ದರೂ ಪಡೆದುಕೊಳ್ಳದೆ ಇರುವಂತೆ- ಸಂಸಾರದಲ್ಲಿ ತೊಳಲುತ್ತಾ ಇರುವನು. ಇದೆಂಥ ಆಶ್ಚರ್ಯವು? ಎಂದು ಉಪನಿಷತ್ತು ತಿಳಿಸುತ್ತಿದೆ.

To.




S..

M.P.O. - 414
Sri.J.Srinivasa Murthy
No.18 - II Cross - Kodandaram-
puram,
P.O. - Bangalore - 3.


Edited Printed & Published by H. S. Lakshminarasimha Murthy as Secretary for The Adhyatma Prakasha Karyalaya, At The Adhyatma Prakasha Press, Holenarsipur - 573211

6—11—1986